ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ–೧೬

# ಕರ್ನಾಟಕ ಕಾದಂಬರಿ

ವಿ. ಸೀತಾರಾಮಯ್ಯ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೪

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ–೧೬

# ಕರ್ನಾಟಕ ಕಾದಂಬರಿ

ವಿ. ಸೀತಾರಾಮಯ್ಯ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೪

# ವಿಷಯಸೂಚಿಕೆ

# ಕಾದಂಬರಿಯಲ್ಲಿನ ಜನ; ಅವರ ಜನ್ಮಾಂತರ ಸಂಬಂಧ

**I.**

- ಶ್ವೇತಕೇತು = ಲಕ್ಷ್ಮಿ[೧]
  - ಪುಂಡರೀಕ = ಮಹಾಶ್ವೇತೆ
    - ವೈಶಂಪಾಯನ[೩]
      - ಗಿಳಿ
- ಹಂಸ = ಗೌರಿ
  - ಮಹಾಶ್ವೇತೆ
- ಚಿತ್ರರಥ = ಮದಿರೆ
  - ಕಾದಂಬರಿ = ಚಂದ್ರಾಪೀಡ[೨] — (ಪತ್ರಲೇಖೆ)
- ಚಂದ್ರ[೧] = ರೋಹಿಣಿ
  - ಚಂದ್ರಾಪೀಡ[೨]
    - ಶೂದ್ರಕ
  - (ಪತ್ರಲೇಖೆ)

**II.**

- ಲಕ್ಷ್ಮಿ (೧)
  - ಚಂಡಾಲಕನ್ಯೆ
- ತಾರಾಪೀಡ = ವಿಲಾಸವತಿ
  - ಚಂದ್ರಾಪೀಡ(೨)
- ಶುಕನಾಸ = ಮನೋರಮೆ
  - ವೈಶಂಪಾಯನ(೩)

**III.**

- ಪುಂಡರೀಕನ ಗೆಳೆಯ ಕಪಿಂಜಲ
  - ಇಂದ್ರಾಯುಧ

# ಕರ್ನಾಟಕ ಕಾದಂಬರಿ

## ೧. ಕಥೆ, ಕವಿ, ಕೃತಿ

ಉಜ್ಜಯಿನಿಯ ಚಕ್ರವರ್ತಿ ತಾರಾಪೀಡ. ಆತನ ರಾಣಿ ವಿಲಾಸವತಿದೇವಿ. ಮಂತ್ರಿ ಶುಕನಾಸ. ರಾಜನೂ ಮಂತ್ರಿಯೂ ಆಪ್ತರಾದ ಗೆಳೆಯರು. ಬೇರೆ ಎಷ್ಟೇ ಸೌಭಾಗ್ಯವಿದ್ದರೂ ಮಕ್ಕಳಿಲ್ಲದ್ದು ಒಂದೇ ರಾಜನ ಬಹುಕಾಲದ ಕೊರತೆ. ಕಡೆಗೆ ಒಬ್ಬ ಮಗ ಹುಟ್ಟುವನು. ಅದೇ ದಿನ ಮಂತ್ರಿಗೂ ಗಂಡು ಮಗು ಆಗುವುದು. ರಾಜಕುಮಾರನಿಗೆ ಚಂದ್ರಾಪೀಡನೆಂದೂ ಮಂತ್ರಿಯ ಮಗನಿಗೆ ವೈಶಂಪಾಯನನೆಂದೂ ಹೆಸರಿಡುವರು. ಒಡನಾಡಿ, ಒಡನೋದಿ ಪರಸ್ಪರ ವಿಶ್ವಾಸಕ್ಕೆ ನೆಲೆಯಾಗಿ ಹುಡುಗರು ಬೆಳೆಯುವರು. ಸೂರ್ಯನೂ ಹಗಲೂ ಎಡೆಬಿಡದೆ ಇರುವಂತೆ ಅಗಲದೆ ಇರುವರು. ಮಗನ ವಿದ್ಯಾಭ್ಯಾಸ ಮುಗಿದ ಮೇಲೆ ಪಾರಸೀಕಾಧೀಶನು ತನಗೆ ಒಪ್ಪಿಸಿದ್ದ ಇಂದ್ರಾಯುಧ ವೆಂಬ ದಿವ್ಯಾಶ್ವವನ್ನು ಕಳಿಸಿಕೊಟ್ಟು ಅವನನ್ನು ದೊರೆ ಊರಿಗೆ ಕರಸಿಕೊಳ್ಳುವನು. ಮಗನ ರೂಪ, ಗುಣ, ಶಕ್ತಿ ಏಳಿಗೆ ಗೊಂಡುದನ್ನು ನೋಡಿ ತಾಯಿ ತಂದೆಯರಿಗೆ ಸಂತೋಷ. ಕುಮಾರರು ಮಹಾರಾಣಿಯನ್ನು ನೋಡಲು ಹೋದಾಗ ಆಕೆ 'ಸಮಸ್ತ ಸತ್ಕುಳಾವನಿತೆಯರೊಳ್ ಮಹೋತ್ಸವದಿ ಕೂಡಿದಿರ್, ಇಂತಿರೆ ಬೇಗದಿಂ ವಧೂಜನದ ಒಡಗೂಡಿಂ' ಎಂದು – ಈ ಹುಟ್ಟಿನಲ್ಲಿ ಅದು ಶಕ್ಯವಿಲ್ಲದೆಂಬುದನ್ನು ತಿಳಿಯದೆ – ಹರಸು ವಳು. ಬಳಿಕ ಅವರು ತಮ್ಮ ಬೀಡಾರಗಳಿಗೆ ಹೋಗುವರು. ಅಕ್ಕರೆಯಿಂದ ತಾನು ಆವರೆಗೂ ಸಾಕಿದ್ದ ಕುಳೂತೇಶ್ವರನ ಮಗಳಾದ ಪತ್ರಲೇಖೆಯನ್ನು ರಾಣಿ ಮಗನ ಸೇವೆಗೆ ಕಳಿಸು

ವಳು. ಬೆಳೆದ ಮಗನಿಗೆ ಯುವರಾಜ ಪಟ್ಟಕಟ್ಟಬೇಕೆಂದು ಯೋಚಿಸಿ ರಾಜನು ಆ ಉತ್ಸವವನ್ನು ಬೇಗ ನೆರವೇರಿಸುವನು.

ಮುಂದೆ ಯುವರಾಜನು ದಿಗ್ವಿಜಯಕ್ಕಾಗಿ ಸೈನ್ಯದೊಡನೆ ಹೊರಡುವನು. ಪತ್ರಲೇಖೆ ವೈಶಂಪಾಯನರೂ ಜೊತೆಗಿರುವರು. ಇಳೆಯನ್ನೆಲ್ಲ ಗೆದ್ದು ಉತ್ತರ ಮೇರೆಯ ಕೈಲಾಸಪರ್ವತದ ಬಳಿಯ ಸುವರ್ಣಪುರದಲ್ಲಿ ಬೀಡುಬಿಡುವರು. ಸೈನ್ಯ ವಿಶ್ರಮಿಸುತ್ತಿರಲು ಯುವರಾಜನು ಬೇಟೆಯ ವಿನೋದದಲ್ಲಿ ಸುತ್ತಾಡುತ್ತಿರುವಾಗ ದೂರದಲ್ಲಿ ಒಂದು ಜೋಡಿ ಕಿನ್ನರ ಕಾಣುವುವು. ಹಿಡಿಯುವ ಆಸೆ ಬಹಳವಾಗಲು ಅವನ್ನು ಅಟ್ಟಿ ಬಹುದೂರ ಹೋಗುವನು. ಇಂದ್ರಾಯುಧದ ವೇಗಕ್ಕೆ ಹಿಂದೆ ಬಿದ್ದ ಉಳಿದ ಪರಿವಾರ ಕಾಣದಾಗುವುದು.

ಇತ್ತ ಮನುಷ್ಯರ ಪರಿಚಯವಿಲ್ಲದ ಕಿನ್ನರಗಳು ಹೆದರಿ ಜೀವಭಯದಿಂದ ಮುಂದೆ ಮುಂದೆ, ಬಹುದೂರ ಓಡಿ ಕಡೆಗೆ ಕೈಲಾಸ ಶಿಖರವೇರಿ ಮರೆಯಾಗಲು ರಾಜಕುಮಾರನಿಗೆ ವ್ಯಾಕುಲವಾಗುವುದು. ಇಂಥ ಅವಿವೇಕಕ್ಕೆ ಏಕೆ ತೊಡಗಿದೆನೆಂದು ಯೋಚಿಸುತ್ತ ಬೇಗ ಪಾಳೆಯಕ್ಕೆ ಹಿಂದಿರುಗಬೇಕು ಎಂದು ಯೋಚಿಸಿ ನೀರುಕುಡಿದು ಸ್ವಲ್ಪ ದಣಿವಾರಿಸಿಕೊಂಡು ಹೋಗೋಣವೆಂದು ಅಚ್ಛೋದ ಸರೋವರದ ತಡಿಗೆ ಬರುವನು. ಅಲ್ಲಿ ವಿಶ್ರಾಂತಿ ಪಡೆಯುತ್ತಿರಲು

ಮುರಿದ ಕೊರಲ್, ಬಳಲ್ದು ಎಳಪಲಾಟಪ ಮೆಯ್, ಕಡೆ
ವಾಯ ಲೋಳೆಯೊಳ್
ಪೊರೆದು ಉಗುತರ್ಪ ಪಚ್ಚೆಪಸಿಯ ಅಚ್ಚಗರುಂಕೆ, ಮರಲ್ದ ದಿಟ್ಟಿ, ಕ
ತ್ತರಿಮೊನೆಗೊಂಡು ಎಳಲ್ವ ಕಿವಿ ಸೂಚಿಸಿದಪ್ಪುದು
ಸೋಲ್ತ ಭಾವಮಂ
ತುರಗಂ ಇದೇನನ್–ಆಲಿಸುತುಂ–ಇರ್ದಪುದು ಎಂದು....

ಭಾವಿಸಿ ನೋಡುತ್ತಿರುವಲ್ಲಿ ಒಂದು ವೀಣೆಯ ಇಂಚರ ವೀಣಾ ವಿದ್ಯಾಧರನಾದ ಆತನಿಗೂ ಕೇಳಿಸುವುದು. ಇಂದ್ರಾಯುಧ ವನ್ನೇರಿ ಆ ಎಡೆಗೆ ಹೋಗಿ ನೋಡುತ್ತಾನೆ: ಹದಿನೆಂಟು ವರ್ಷದ ಚೆಲುವೆ ತಾಪಸಿಯೊಬ್ಬಳು ಸ್ಫಟಿಕದ ಶಿವಲಿಂಗವನ್ನು ಆರಾಧಿಸುತ್ತ ಭಕ್ತಿಯೇ ಭವಸನ್ನಿಧಿಯಲ್ಲಿ ರೂಪಗೊಂಡಂತೆ ಇರುವುದು ಕಂಡಿತು. ತಾನೆಲ್ಲಿ? ಕಿನ್ನರ ಬೇಟೆಯೆಲ್ಲಿ? ಸರೋವರ ಆಶ್ರಮಗಳೆಲ್ಲಿ? ದಿವ್ಯಾಂಗನೆ ಎಲ್ಲಿ? ಎಳವಯಸ್ಸಿ ನಲ್ಲಿ ನಿಷ್ಠುರ ತಪಸ್ಸಿದೇನು? ಎಲ್ಲ ಚೋದ್ಯವಾಗಿದೆ. ಕಿನ್ನರ ಗಳಂತೆ ಈಕೆಯೂ ತನ್ನನ್ನು ಕಂಡು ಮಾಯವಾಗದೆ ಇದ್ದರೆ ಎಲ್ಲವನ್ನೂ ತಿಳಿಯಬೇಕು ಎಂಬ ಕುತೂಹಲ ಉಂಟಾಗು ತ್ತದೆ. ಗಂಭೀರೆಯೂ ಉರ್ಜಿತಮತಿಯೂ ನಿರ್ಮಳೆಯೂ ಅಮಳಧೈರ್ಯ ಗುಣಾನ್ವಿತೆಯೂ ದೃಢಪಾಶುಪತವ್ರತೆಯೂ ಆಗಿ ಶಿವಪೂಜೆ ಮಾಡುತ್ತಿದ್ದ ಆಕೆಯಲ್ಲಿ ಆತನಿಗೆ ಗೌರವ ಹುಟ್ಟಿ ಗೀತಾರಾಧನೆ ಮುಗಿಯುವವರೆಗೂ ದೇವಾಲಯದ ಒಂದು ಕಂಬಕ್ಕೆ ಒರಗಿನಿಂತು ಕಾದಿರುವನು.

ಆರಾಧನೆ ಮುಗಿದ ಕೂಡಲೆ ಸ್ವಾಗತಿಸಿ, ಆತನು ತನ್ನ ಅಭ್ಯಾಗತನಾಗಬೇಕೆಂದು ಆಕೆ ಹೇಳುವಳು. ಅವಳೊಡನೆ ಆಶ್ರಮಕ್ಕೆ ಹೋಗಿ ಹಣ್ಣು ತಿಂದು, ನೀರು ಕುಡಿದು ಬಳಲಿಕೆ ಆರಿಸಿಕೊಳ್ಳುವನು. ಕುಮಾರನು ತನ್ನ ವೃತ್ತಾಂತವನ್ನು ಮೊದಲು ತಿಳಿಸಿ ಆಮೇಲೆ ಮರ್ಯಾದೆಯಿಂದ, 'ಮನುಜನಿಗೆ ಕೌತುಕಾವಹ ಇಷ್ಟೊಂದು ಆಶ್ಚರ್ಯ. ಈ ಮನಸ್ಸು ಬೆಸ ಗೊಳ್ಳಲು ಅನುಗೆಯ್ಯುತ್ತಿದೆ. ದೇವಿ, ಹೇಳಬೇಕು: ಹೊಸ ಜವ್ವನದ ಏಳ್ಗೆಯಲ್ಲಿ ತಪಶ್ಚರಣೆ ಇದೇನು?.... ಕಾನನದಲ್ಲಿ ಬಿಡದೆ ಒಬ್ಬಳೆ ಇರುವುದೇನು?' ಎಂದು ಕೇಳುವನು.

ಯಾವುದೋ ಸತ್ಯವನ್ನು ನೆನಪು ಎಚ್ಚರಿಸಿದಂತಾಗಿರಬೇಕು. ಆಕೆಯ ಸಂಯಮದ ಮುದ್ರೆ ಒಡೆಯಿತು. ಶಾಂತಿ ಕರಗಿತು. ಈ ಶೋಕವನ್ನು ಮುಳ್ಗಿಸಲು ಇನ್ನಾರಾರ್ಪರು ? ನಾನೇಕೆ ಸುಮ್ಮನೆ ಆಕೆಯನ್ನು ಪ್ರಶ್ನೆ ಕೇಳಿದೆ ? ಎಂದು ಕುಮಾರನಿಗೆ ವ್ಯಥೆ ಉಂಟಾಗುವಷ್ಟು ಆಕೆ ಅಳವಿಲ್ಲದೆ ಅಳುವಳು. ಇಂತಹ ವರೂ ಅಳುವಂದ ಅದ್ಭುತ, ಎಂದು ಆತನು ಭಾವಿಸುತ್ತಿರಲು ಆಕೆ ಸಮಾಧಾನಗೊಂಡು ' ಗತಭಾಗ್ಯಳಾಗಿ ಪತಿದುಃಖ ಭಾಜನೆ ಯಾದವಳ ವೃತಾಂತವನ್ನೇನು ಕೇಳುವೆ ? ಕೇಳಬೇಕೆನಿಸಿದರೆ ಹೇಳುವೆನು '—ಎಂದು ತನ್ನ ಕಥೆ ಹೇಳುವಳು.

**ಮಹಾಶ್ವೇತೆ ಹೇಳಿದ್ದು :** ಗಂಧರ್ವರಾಜ ಹಂಸನಿಗೆ ಗೌರಿ ಯೆಂಬ ಅಪ್ಸರೆ ರಾಣಿ. ಅವರಿಗೆ ಅಪರೂಪದ ಮಗಳಾಗಿ ಹುಟ್ಟಿದ ನನಗೆ ಮಹಾಶ್ವೇತೆ ಎಂದು ಹೆಸರು. ಮುದ್ದಿನಲ್ಲಿ ಬೆಳೆದು ಎಲ್ಲರಿಗೂ ಅಚ್ಚುಮೆಚ್ಚಾದೆ. ವರ್ಷಕ್ಕೆ ವಸಂತ ಬರುವಂತೆ, ಗಿಡಕ್ಕೆ ಚಿಗುರು ಕಾಂತಿ ತರುವಂತೆ, ಚಿಗುರಿಗೆ ಹೂ ಪುಳಕ ಕೊಡುವಂತೆ ನನಗೆ ಯೌವನೋದಯವಾಯಿತು. ಒಂದು ದಿನ ಅಚ್ಛೋದ ಸರಸ್ಸಿಗೆ ತಾಯೊಡನೆ ಮಿಾಯಲು ಹೋದೆ. ತಾಯಿ ನೀರಿಗಿಳಿದಿದ್ದಾಗ ಸುತ್ತಲ ವಸಂತವನ ಭಾಗ್ಯವನ್ನು ನೋಡುತ್ತ ತಿರುಗಾಡಿದೆ. ದೂರದಿಂದ ಬಂದ ಒಂದು ಸುಗಂಧವೂ ಅದನ್ನು ಮುತ್ತಿದ ತುಂಬಿಗಳ ಝೇಂಕಾರವೂ ಮನಸ್ಸನ್ನು ಅತ್ತ ಸೆಳೆದುವು. ಒಂದೆರಡು ಹೆಜ್ಜೆ ಹೋಗಿ ನೋಡುವಲ್ಲಿ ಇಬ್ಬರು ಋಷಿಕುಮಾರರು ಬರು ತ್ತಿದ್ದರು. ಮುಂದೆ ಬರುತ್ತಿದ್ದ ಕುಮಾರನ ಕೈಯಲ್ಲಿ ಜಪಸರ, ಕಮಂಡಲು ; ಮೊಗಮಿಾಸೆ ಬಾರದಿದ್ದೂ ಸೊಗಸುವ ಮುಖ ತುಂಬಿಗಳೆಗರದ ಹೊನ್ದಾವರೆಯಂತೆ ಇತ್ತು. ಆ ರೂಪು

ಕಂಡೊಡನೆಯೆ ಮೋಹವುಂಟಾಯಿತು. ನನ್ನ ನಡತೆ ತಕ್ಕು ದಲ್ಲವೆಂದೂ ತೋರಿತು. ಆದುದರಿಂದ ನನ್ನನ್ನು ನಾನೇ ಸಂತೈಸಿಕೊಂಡು ಮನಸ್ಸನ್ನು ಹಗುರ ಬಿಡಬಾರದು, ಬುದ್ಧಿ ಪರವಶವಾಗುವ ಮೊದಲೆ, ಋಷಿಕುಮಾರನು ಈ ಕಾಮ ವಿಕಾರವನ್ನು ಕಂಡು ಶಾಪಕೊಡುವ ಮುಂಚೆಯೆ ಅಲ್ಲಿಂದ ಹೊರಟು ಹೋಗಬೇಕು ಎಂದು ನಿಶ್ಚಯಿಸಿದೆ. ಇನ್ನೊಂದು ಕಡೆ ಪೂಜ್ಯರನ್ನು ಉಪೇಕ್ಷಿಸಬಾರದೆಂದೂ ಆತನಿಗೆ ನಮಸ್ಕಾರ ಮಾಡಿ ಹೋಗಬೇಕೆಂದೂ ಅನ್ನಿಸಿತು. ಬಳಿಗೆ ಹೋಗಿ ಅಕ್ಕರೆಯಿಂದ ನಮಸ್ಕರಿಸಿದೆ. ನನ್ನ ತಲೆಕೂದಲಲ್ಲಿ ಚಿನ್ನದ ಹೂಗಳು; ಕಿವಿಯಲ್ಲಿ ಕೋಮಲ ಪಲ್ಲವ ಕರ್ಣಪೂರ; ಹೆಗಲಲ್ಲಿ ಆಡುತ್ತಿರುವ ಮಣಿಕುಂಡಲ; ಮನಸ್ಸು ಆತನನ್ನು ಬಯಸುತ್ತಿದೆ; ಎವೆಯಿಡದ ಕಣ್ಣು ಆತನ ಮುಖದತ್ತವೇ ಇವೆ. ಜೊತೆಗೆ ಸುತ್ತಲ ಚೆಲುವೆಲ್ಲ ಸಂಚುಮಾಡಿತು. ವಸಂತ, ತಂಗಾಳಿ, ವನಶೋಭೆ, ಮನ್ಮಥ-ಸಂಚುಗಾರರಾದರು. ನನಗೂ ದುಃಖ ಬರಬೇಕಿತ್ತು: 'ಗಾಳಿಗೊಡ್ಡಿದ ದೀಪಾಂಕುರದಂತೆ ತನ್ಮನಿಯುಮಂ ಕಾಮಂ ಚಲಂ ಮಾಡಿದಂ.'

ಆ ಸೋಲು ಕಂಡಿತು. ಜೊತೆಯ ಕುಮಾರನನ್ನು ಕುರಿ ತವಳು 'ಈತನಾರು? ಹೆಸರೇನು? ಈತನು ತೊಟ್ಟಿರುವ ಕರ್ಣಾವತಂಸ ಲೋಕಕ್ಕೆ ಹೊಸದು. ಯಾವ ಮರದ ಹೂಗೊಂಚಲಿಂದಾದ್ದು?' ಎಂದು ಕುತೂಹಲದಿಂದ ಕೇಳಿದೆ. ನಾನೊಲಿದಾತ ಶ್ವೇತಕೇತು ಮುನಿಯ ಮಗ ಪುಂಡರೀಕನಂತೆ; ತಾನು ಆತನ ಗೆಳೆಯ ಕಪಿಂಜಲನಂತೆ; ಪುಂಡರೀಕನ ಕಿವಿ ಯಲ್ಲಿದ್ದುದು ಪಾರಿಜಾತವಂತೆ. ಶಿವದರ್ಶನಕ್ಕಾಗಿ ಇವರು ಬರುತ್ತಿರಲು ದಾರಿಯಲ್ಲಿ ವನದೇವತೆ ಒಬ್ಬಳು ಬಂದು

ಪುಂಡರೀಕನು ಎಷ್ಟು ಒಲ್ಲೆನೆಂದರೂ ಕೇಳದೆ ಆತನಿಗೆ ಮುಡಿಸಿ ಹೋಗಿದ್ದಳಂತೆ. ಕಪಿಂಜಲನು ಇದನ್ನು ತಿಳಿಸುತ್ತಿರಲು ಪುಂಡರೀಕನು ನನ್ನನ್ನು ಕುರಿತು—

ಎಳಸುತ್ತಿರ್ದಪೆ ಪುಷ್ಪಮಂಜರಿಗೆ; ಕೊಳ್; ಈ ಸುತ್ತಿದೇಕೆ ಎಂದುಸಂ
ಚಳಿಸುತ್ತಂ ನಿಜಕರ್ಣದಿಂ ತೆಗೆದು ' ಸೋಲ್ತೆಂ ಕೂಡು
ನೀನೆನ್ನೊಳ್ ' ಎಂದು
ಅಳಿಮಾಲಾರವದಿಂದೆ ಪೇಳ್ವ ತೆರದಿಂ ಮತ್ಕರ್ಣದೊಳ್ ತಾರಕೋ
ಜ್ಜ್ವಲಮಂ ರಂಜಿಪ ಪುಷ್ಪಮಂಜರಿಯನ್ ಆತ್ಯಾತ್ಸುಕ್ಯದಿಂದ
ಇಕ್ಕಿದಂ

ಇನ್ನು ಹೇಳುವುದೇನು? ನನ್ನ ಕೆನ್ನೆಯ ನಸುಸೋಂಕಿನ ಒಂದು ಸುಖದಿಂದ ಅಧಿಕವಾಗಿ ಕಂಪಿಸುತ್ತಿರುವ ಕೈಯಿಂದ ಅಕ್ಷಮಾಲೆ ನಾಣ್ಬೆರಸಿ ಬಿದ್ದುಹೋಯಿತು. ಏನಾಯಿತೆಂಬುದರ ಅರಿವು ಆತನಿಗಿರಲಿಲ್ಲ. ಸರ ನೆಲಕ್ಕೆ ಬೀಳುವ ಮುಂಚೆ ಅದನ್ನು ಹಿಡಿದು ನಾನು ಕೊರಳಿಗೆ ಹಾಕಿಕೊಂಡು ಸುಖಪಟ್ಟೆ. ಇಷ್ಟರಲ್ಲಿ ನನ್ನ ಕೊಡೆವೊಳಿಗದಾಕೆ ಬಂದು ದೇವಿಯವರ ಸ್ನಾನ ವಾಯಿತು, ಮನೆಗೆ ಹೋಗಲಿದ್ದಾರೆ. ಮಜ್ಜನಕ್ಕೆ ಈಗಲೆ ನಡೆ ಎಂದು ಹೇಳಿ ಇಚ್ಛೆಯಿಲ್ಲದಿದ್ದರೂ ಅಲ್ಲಿಂದ ನನ್ನನ್ನು ಕೊಂಡುಹೋದಳು.

ಪುಂಡರೀಕನ ನಡತೆಯನ್ನು ನೋಡಿ ಕಪಿಂಜಲನು ಬಹು ವಾಗಿ ಆಕ್ಷೇಪಿಸಿದನಂತೆ. ನಿನಗೀಗ ಇಂದ್ರಿಯದ ಡಾವರ ಎತ್ತಲಿಂದ ಬಂತು? ಇದು ಅನುರೂಪವಲ್ಲ. ಕೀಳರ ಮಾರ್ಗ ಎಂಬುದನ್ನು ವಿಚಾರಿಸದೆ ಸ್ವೈರಣೆಕೆಟ್ಟು, ಅರಿವು ಎತ್ತ ಹೊಯ್ತೊ ಎಂಬಂತೆ ಎದೆಗೆಟ್ಟು, ಮೈಸ್ ಅರಿಯದೆ ನೀನು ಇರಬಹುದೆ? ಇನ್ನಾದರೂ ಮನಸ್ಸನ್ನು ನಿಲ್ಲಿಸಿಕೊ ಎಂದನಂತೆ. ಪುಂಡರೀಕ ನಿಗೆ ನಾಚಿಕೆಯಾಗಿ ನನ್ನ ಬಳಿ ಬಂದು ಹುಸಿಕೋಪದಿಂದ

ಕುಡು, ಚಪಳೆ, ಜಪದ ಮಣಿಯಂ
ಕುಡದೆ ಇನ್ನೊಂದಡಿಯುನಪ್ಪೊಡಂ ಪೋಗದಿರ್ ಎಂ
ದೊಡೆ ಕೇಳ್ದು ಜಪದ ಮಣಿ ಗೆತ್ತು
ಒಡನೆಯೆ ಹಾರಮನೆ ತೆಗೆದೆನ್–ಎನ್ನಯ ಕೊರಲಿಂ

ಆತನ ದೃಷ್ಟಿ ನನ್ನ ಮುಖದಲ್ಲಿ ಆಸಕ್ತವಾಗಿತ್ತು. ಮೆಯ್ಯರಿಯದೆ ತನ್ನ ಜಪಸರವೇ ಅದು ಎಂಬ ಭ್ರಾಂತಿಯಿಂದ ಆತನು ಮುತ್ತಿನ ಹಾರವನ್ನು ತೆಗೆದುಕೊಂಡು ಹೋದನು.

ನಾನು ಮನೆಗೆ ಬಂದೆ. ಆದರೆ ಆ ಹೊತ್ತಿಗೆ ಪೂರ್ತಿ ಪರಾಧೀನಳಾಗಿ ಹೋಗಿದ್ದೆ. ಮೈ, ಮನಸ್ಸು, ಆಸೆ ಎಲ್ಲವೂ ಆತನವಾಗಿದ್ದುವು. ಅಚ್ಛೋದದ ಕಡೆಯೇ ನೋಟ, ಅಲ್ಲಿಯೇ ಜೀವ, ಆತನದೇ ಧ್ಯಾನ—ಹೀಗಿರಲು ನನ್ನ ಬಳಿಗೆ ಮಕರಿಕೆ ಬಂದು ಪುಂಡರೀಕನು ಬರೆದು ಕಳಿಸಿದ್ದ ಸಂದೇಶವೊಂದನ್ನು ಕೈಗೆ ಕೊಟ್ಟಳು. ಆತನ ಮನಸ್ಸು ಹೇಗೆ ನನ್ನಲ್ಲಿ ಸೇರಿಹೋಗಿದೆ ಯೆಂಬುದನ್ನು ಆ ಮೂಲಕ ತಿಳಿದ ನನಗೆ ಪರಮಾನಂದ ವಾಯಿತು. ಸಂಜೆಯ ಹೊತ್ತಿಗೆ ಕಪಿಂಜಲನು ನನ್ನಲ್ಲಿಗೆ ಬಂದು ತನ್ನ ಗೆಳೆಯನ ಸ್ಥಿತಿ, ಗತಿ, ರೀತಿಗಳನ್ನೂ ಕಂಗಾಲು ತನವನ್ನೂ ದೀನವಾಗಿ ವರ್ಣಿಸಿದನು. ನನ್ನ ದಯೆಯಿಂದ ಮಾತ್ರ ಅವನು ಬದುಕಬಹುದು, ಈ ಸನ್ನಿವೇಶಕ್ಕೆ ತಕ್ಕಂತಹುದನ್ನು ನೀನು ಮಾಡಬೇಕು ಎಂದು ಬೇಡಿ ಹೋದನು. ಮಗಳು ಅಸ್ವಸ್ಥಳಾಗಿರುವುದನ್ನು ಕೇಳಿ ಈ ನಡುವೆ ನನ್ನ ತಾಯಿ ಬಂದು ಬಹಳ ಹೊತ್ತು ಇದ್ದು ಹೋಗಿದ್ದಳು. ಆ ಅರಿವೇ ನನಗಿಲ್ಲವಾಗಿತ್ತು. ಮದನಾತುರೆಯಾದ ನನಗೆ ಇನ್ನು ತಾಯಿ, ತಂದೆ, ಬಂಧು, ಬಳಗ, ಕುಲ, ಕೀರ್ತಿ, ಲೋಕ ವಿಚಾರ ಯಾವುದೂ ಬೇಕಾಗಲಿಲ್ಲ. ಸಂಜೆಯ ಹೊತ್ತಿಗೆ

ಕೆಳದಿ ತರಳಿಕೆಯೊಡನೆ ಪುಂಡರೀಕನಿರುವೆಡೆಗೆ ಹೊರಟೆ. ಚಂದ್ರೋದಯವಾಗಿ ಅಂತಃಕರಣ ಸೊಕ್ಕಿತು. ಎಡಗಣ್ಣು ಅದುರಿತು. ಅಪಶಕುನಕ್ಕೆ ಹೆದರಿ ಮುಂದೆ ನಡೆಯುತ್ತಿರಲು ಗಂಡುಕೊರಲ ಅಳು ಕೇಳಿಸಿತು. ಏನುಗತಿ ಬಂತೊ ಎಂದು ಹೋಗಿ ನೋಡುವಲ್ಲಿ ಪುಂಡರೀಕನು ಮೃತನಾಗಿ ಬಿದ್ದಿರುವುದೂ ಕಪಿಂಜಲ ಗೋಳಿಡುತ್ತಿರುವುದೂ ಕಾಣಿಸಿತು. ಕತ್ತಲು ಕವಿದಂತಾಗಿ ನಾನೂ ಮೂರ್ಛೆಬಿದ್ದೆ. ಎಚ್ಚೆತ್ತಮೇಲೆ ದಿಕ್ಕು ದಿಕ್ಕಿಗೆ ಮೊರೆಯಿಟ್ಟೆ. ಪುರುಷಭಿಕ್ಷೆಯನ್ನು ನೀಡಿರೆಂದು ವಿಶ್ವವನ್ನೇ ಬೇಡಿಕೊಂಡೆ. ಯಾವ ತೆರದಿಂದ ಯಾರೂ ಕಾವರಿಲ್ಲದ್ದನ್ನು ಕಂಡು ಪ್ರಿಯನ ಗತಿಯೇ ನನ್ನದು ಎಂದು ಭಾವಿಸಿ ಸಹಗಮನ ಮಾಡಬೇಕೆಂದಿರುವ ಹೊತ್ತಿಗೆ ಚಂದ್ರಮಂಡಲದಿಂದ ದಿವ್ಯಪುರುಷನೊಬ್ಬನು ಬಂದು ತಡೆದನು.

> ಬಗೆಗೆಟ್ಟು ಸಾವಬಗೆಯಂ
> ಮಗಳೆ, ಮಹಾಶ್ವೇತೆ, ಬಗೆಯದಿರ್ ; ಕೂಡುವೆ ನೀಂ
> ಮಗುಳೆಯುಂ ಈತನನ್

ಎಂದು ನಂಬಿಕೆ ಹೇಳಿ ಆತನ ದೇಹವನ್ನೆತ್ತಿಕೊಂಡು ಚಂದ್ರಲೋಕದತ್ತ ಹೋದನು. ಇಷ್ಟೂ ಒಂದು ಕ್ಷಣದಲ್ಲಿ ನಡೆದು ಹೋಯಿತು. ಕಪಿಂಜಲನನ್ನು ಕುರಿತು ನಾನು ಇದೇನೆಂದು ಕೇಳಲು ಆತನು ಉತ್ತರಕೊಡದೆ ಮುಖವೆತ್ತಿ, ನನ್ನ ಸಖನನ್ನು ಒಯ್ಯುವೆ ಎತ್ತ ? ಬಿಡು—ಎಂದು ಕೋಪದಿಂದ ಆತನ ಹಿಂದೆಯೇ ಅಂತರಿಕ್ಷಕ್ಕೆ ನೆಗೆದನು.

ಕಪಿಂಜಲ ಹೋದುದರಿಂದ ನನ್ನ ಶೋಕ ನೂರ್ಮಡಿಯಾಯಿತು. ವನದಲ್ಲಿ ತರಳಿಕೆ, ನಾನು ಇಬ್ಬರೇ ಉಳಿದೆವು. ನಾನಾ ಬಗೆಯಲ್ಲಿ ಸಮಾಧಾನ ಹೇಳಿ ಕಪಿಂಜಲನು ಹಿಂದಿರು

ಗುವ ವರೆಗಾದರೂ ಬದುಕಿರಬೇಕೆಂದು ಆಕೆ ಬೇಡಿಕೊಂಡಳು. ಆಸೆಯಿಲ್ಲದ ಆಸೆಯಿಂದ ಒಪ್ಪಿ ಬೆಳಗಿನಜಾವ ಆಕೆಯು ನೆರವಿಂದ ಕೊಳದಲ್ಲಿಳಿದು ಮಿಂದೆ. ಆದರೆ ಮನೆಗೆ ಹಿಂದಿರುಗುವ ಇಷ್ಟ ವಿಲ್ಲವಾಯಿತು. ಪ್ರಿಯನ ನಾರುಡೆ, ಜಪಸರ, ಕಮಂಡಲು ಗಳನ್ನೇ ತೆಗೆದುಕೊಂಡು ಆತನ ವೇಷವನ್ನೇ ತಾಳಿ ವ್ರತತಳೆದೆ. ಈ ಕೊಳದ ತಡಿಯಲ್ಲಿ ಆಶ್ರಮ ಮಾಡಿಕೊಂಡು ಶಿವನಲ್ಲಿ ಶರಣು ಬೇಡಿದ್ದೇನೆ. ತಂದೆ ತಾಯಿ ಬಂದು ಬಹುವಾಗಿ ಬೇಡಿಕೊಂಡರು. ನನ್ನ ಮನಸ್ಸು ತಿರುಗಲಿಲ್ಲ. ಜಪದಿಂದ ತಪದಿಂದ ಒಡಲನ್ನು ದಂಡಿಸುವೆನೆಂದರೆ ಅದು ಕೃತಜ್ಞತೆ ಅಲ್ಲವೆ! ಛೀ! ಜಪದ ನೆವದಿಂದ ನಾನು ಎಣಿಸುತ್ತಿರು ವುದಾದರೂ ಏನು? ಪ್ರಿಯನ ಗುಣಗಳನ್ನೇ—ಇಂತಹ ನಿರ್ಭಾಗ್ಯೆಯ ಕಥೆಯನ್ನು ಕೇಳಿ ಫಲವೇನು?

—ಎಂದು ನುಡಿಯುವಳು.

ಆ ದುಃಖಪ್ರಸಂಗ ಅಂದು ಪುನಃ ನಡೆಯಿತೆಂಬಷ್ಟು ತೀವ್ರ ಶೋಕ ಆಕೆಗೆ ಉಂಟಾಗಿತ್ತು. ಚಂದ್ರಾಪೀಡನು ಆಕೆಗೆ ಸಮಾಧಾನ ಹೇಳುವನು. ಹತ್ತಿರದ ಅಬ್ಬಿಯ ನೀರು ತಂದು ಕೊಡಲು ಆಕೆ ಮುಖ ತೊಳೆದುಕೊಳ್ಳುವಳು. ಆತನ ಕುತೂಹಲ ಮತ್ತಷ್ಟು ಹೆಚ್ಚಿ ನಿಮ್ಮ ಜೊತೆಯ ತರಳಿಕೆ ಎಲ್ಲಿ ಎಂದು ಪ್ರಶ್ನೆಮಾಡುವನು. ಮಹಾಶ್ವೇತೆ ಅದಕ್ಕೆ ಉತ್ತರ ಕೊಡುತ್ತ ಕಾದಂಬರಿಯ ವೃತ್ತಾಂತವನ್ನು ತಿಳಿಸುವಳು:

**ಕಾದಂಬರಿಯ ಕಥೆ:** ಚಿತ್ರರಥನೆಂಬ ಗಂಧರ್ವರಾಜನಿಗೂ ಆತನ ಅರಸಿತಿ ಅಪ್ಸರೆ ಮದಿರಾದೇವಿಗೂ ನನ್ನ ಗೆಳತಿ ಕಾದಂಬರಿ ಮಗಳು. ಆಕೆ ಗುಣವತಿ, ಸ್ನೇಹಶೀಲೆ. ನನಗೆ ಬಂದ ಕಷ್ಟವನ್ನು ಕೇಳಿ ತಾನೂ ಕನ್ಯಾವ್ರತದಲ್ಲಿ ಕಾಲ

ಕಳೆಯುವೆನೆಂದು ತೀರ್ಮಾನ ಮಾಡಿದ್ದಾಳೆ. ತಾಯಿ ತಂದೆ ಎಷ್ಟು ಬೇಡಿಕೊಂಡರೂ ಕೇಳಳು. ಅವರು ನನಗೆ ಹೇಳಿ ಕಳಿಸಿದರು. ನಾನು ಕಾದಂಬರಿಯ ಮನಸ್ಸನ್ನು ತಿರುಗಿಸಲು ಯತ್ನಿಸಿ ಹಿರಿಯರ ಮಾತು ಕೇಳಬೇಕೆಂದೂ ನಾನು ಬದುಕಿರ ಬೇಕಾದರೆ ತಾನು ಹಟಮಾಡಕೂಡದು ಎಂದೂ ತಿಳಿಸಿ ಬಾರೆಂದು ತರಳಿಕೆಯನ್ನು ಕಾದಂಬರಿಯ ಬಳಿಗೆ ಅತ್ತ ಕಳಿಸಿದೆ. ಇತ್ತ ನೀವು ಬಂದಿರಿ, ಎಂದಳು.

ಇರುಳು ಕಳೆದು ಬೆಳಗಾಯಿತು. ಕೇಯೂರಕನೆಂಬ ಕಾದಂಬರಿಯ ವೀಣಾಧರನೊಡನೆ ತರಳಿಕೆ ಬಂದಳು. ಕಾದಂಬರಿ ಹೇಗೂ ತನ್ನ ನಿರ್ಧರವನ್ನು ಬಿಡಳೆಂಬ ಸಂಗತಿ ಮನವರಿಕೆಯಾಯಿತು.

ಮಹಾಶ್ವೇತೆಗೆ ಒಂದು ಯೋಚನೆ ಹೊಳೆಯಿತು. 'ನಾನೇ ಬಂದು ಅಲ್ಲಿಗೆ ತಕ್ಕುದೆಲ್ಲವನ್ನೂ ನಯದಿಂದ ಹೇಳುತ್ತೇನೆ. ನೀನು ಮುಂದೆ ಹೋಗು' ಎಂದು ಕೇಯೂರಕನಿಗೆ ಹೇಳಿಕಳಿಸಿ ಚಂದ್ರಾಪೀಡನನ್ನು ಕರೆದುಕೊಂಡು ರಾಜಧಾನಿಯಾದ ಹೇಮಕೂಟಕ್ಕೆ ಹೋಗುವಳು. ಮೊದಲ ನೋಟದಲ್ಲಿಯೇ ಕಾದಂಬರಿ ಚಂದ್ರಾಪೀಡರಿಗೆ ಅನುರಾಗ ಹುಟ್ಟಿ ಒಬ್ಬರಿಗೊಬ್ಬರು ಮನಸೋಲುವರು. ಇದನ್ನು ಕಂಡು ಮಹಾಶ್ವೇತೆಗೆ ಸಂತೋಷವಾಯಿತು. ಸ್ವಾಗತದ ಉಪಚಾರಗಳು ನಡೆದಮೇಲೆ ಚಂದ್ರಾಪೀಡನನ್ನು ಬೀಡಾರಕ್ಕೆ ಕಳಿಸಿ ಶೇಷವೆಂಬ ಮುತ್ತಿನ ಹಾರವನ್ನು ಮೆಚ್ಚು ಕಳಿಸುವರು. ಬಳಿಕ ಕಾದಂಬರಿಯೇ ಆತನಿರುವಲ್ಲಿಗೆ ಬಂದು ಮಾನ್ಯ ಅತಿಥಿಗೆ ತೋರಬೇಕಾದ ಲೋಕಮರ್ಯಾದೆಯಂತೆ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುವಳು. ರೂಪಕ್ಕೆ ಸೋತಿದ್ದ

ಹೃದಯಗಳಿಗೆ ಗುಣ, ನಯ ಕಂಡು ಪ್ರೇಮ ಬಲಿಯುವುದು. ಆದರೇನು? ಒಂದು ದಿನ ಮಟ್ಟಿಗೆ ಮಾತ್ರ ಚಂದ್ರಾಪೀಡನು ಅಲ್ಲಿರಲು ಬಂದಿದ್ದುದು. ಮರುದಿನ ಬೆಳಿಗ್ಗೆ ಅವರಿದ್ದಲ್ಲಿಗೆ ಹೋಗಿ ತಾನು ಮರಳಬೇಕೆಂದು ಅವರ ಅಪ್ಪಣೆ ಪಡೆದು ಪಾಳೆಯಕ್ಕೆ ಹಿಂದಿರುಗಿ ಬರುವನು. ಹಗಲಿರುಳು ಈತನಿಗೆ ಕಾದಂಬರಿಯ ಯೋಚನೆಯೇ.

ಕಾದಂಬರಿಗೂ ಹಾಗೆಯೇ ಅವನಿಲ್ಲದ ಪ್ರಪಂಚ ಬೇಡ ವಾಗಿತ್ತು. ಚಂದ್ರಾಪೀಡನು ಪರಿವಾರವನ್ನು ಸೇರಿದುದೆ ತಡ, ಕಾದಂಬರಿ ಅಸ್ವಸ್ಥಳಾಗಿದ್ದಾಳೆಂದೂ ತಾವೆಲ್ಲ ಇನ್ನೊಂದು ಬಾರಿ ಕುಮಾರನನ್ನು ನೋಡಬಯಸುತ್ತಿರುವರೆಂದೂ ಒಂದು ಸಲ ದಯಮಾಡಿ ಬಂದು ಹೋಗಬೇಕೆಂದೂ ಮಹಾಶ್ವೇತೆ ಕರೆ ಕಳಿಸುವಳು. ಈ ಸಲ ಪತ್ರಲೇಖೆಯನ್ನು ಕರೆದುಕೊಂಡು ಹೇಮಕೂಟಕ್ಕೆ ಹೋಗಿ ಕಾದಂಬರಿಯ ಪ್ರೇಮ ಮತ್ತಷ್ಟು ಸ್ಪಷ್ಟವಾಗಿ ಕಾಣುತ್ತಿದ್ದರೂ ತನ್ನ ಮರ್ಯಾದೆಯಲ್ಲಿ ತಾನಿದ್ದು ಕಾದಂಬರಿಯ ಇಷ್ಟದಂತೆ ಪತ್ರಲೇಖೆಯನ್ನು ಆಕೆಯ ಬಳಿಯೇ ಬಿಟ್ಟು ತನ್ನ ಪಾಳೆಯಕ್ಕೆ ಹಿಂದಿರುಗುವನು. ಇಷ್ಟುಹೊತ್ತಿಗೆ ತಂದೆಯಿಂದ ಪತ್ರ ಬಂದಿತ್ತು: ದಿಗ್ವಿಜಯಕ್ಕಾಗಿ ಹೊರಟು ಬಹುಕಾಲವಾಗಿದೆ, ತಾಯಿಯರು ತವಕಪಡುತ್ತಿದ್ದಾರೆ, ಕೂಡಲೆ ಊರಿಗೆ ಮರಳತಕ್ಕದ್ದು—ಎಂಬ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಮನಸ್ಸಿಲ್ಲದ ಮನಸ್ಸಿಂದ ಉಜ್ಜಯಿನಿಗೆ ಪ್ರಯಾಣಮಾಡುವನು.

ವೈಶಂಪಾಯನನೂ ಸೈನ್ಯದ ಸ್ವಲ್ಪ ಭಾಗದವರೂ ಹಿಂದುಳಿಯುತ್ತಾರೆ. ಪತ್ರಲೇಖೆಯನ್ನು ಉಜ್ಜಯಿನಿಗೆ ಕರೆತರುವ ಕೆಲಸ ಅವರ ಪಾಲಿಗೆ ಬೀಳುತ್ತದೆ.

ಊರಿಗೆ ಬಂದು ಹಿರಿಯರನ್ನು ಕಂಡು ಸಂತೋಷಪಡಿಸಿ

ದ್ವೇನೊ ಆಯಿತು. ಮನಸ್ಸು ಮಾತ್ರ ಹೇಮಕೂಟದಲ್ಲಿತ್ತು. ಕೇಯೂರಕನೂ ಪತ್ರಲೇಖೆಯೂ ಅಲ್ಲಿಗೆ ಬಂದು ಕಾದಂಬರಿಯ ಸ್ಥಿತಿಯನ್ನು ವಿಶದಪಡಿಸಿದರು. ಆತನಿಗೆ ಆಕೆಯ ಪ್ರೇಮದ ಆಳ ತಿಳಿಯಿತು. ತಾಯಿತಂದೆಗಳಿಗೆ ತಿಳಿಸದೆ ಹೋಗುವುದು ಸರಿಯಲ್ಲ; ತಿಳಿಸಲು ನಾಚಿಕೆ. ಆದ್ದರಿಂದ ವೈಶಂಪಾಯನನು ಬಂದಕೂಡಲೆ ಅವನ ಮೂಲಕ ಎಲ್ಲವನ್ನೂ ಹಿರಿಯರಿಗೆ ಹೇಳಿಸಿ ಎರಡು ಕಡೆಯವರೂ ಒಂದಾಗಿ ಮದುವೆ ನೆರವೇರಿಸುವಂತೆ ಮಾಡಬೇಕೆಂದು ಯೋಚಿಸಿ ವೈಶಂಪಾಯನ ಬರುವುದನ್ನೇ ಹಾರೈಸುತ್ತಿದ್ದನು. ಕೆಲವು ದಿನಗಳಲ್ಲಿ ತನ್ನ ಸೈನ್ಯ ದಶಪುರಕ್ಕೆ ಬಂದಿತೆಂಬ ಸುದ್ದಿ ಮುಟ್ಟಿತು. ಹೇಗಾದರೂ ಮಾಡಿ ತಾನು ಬೇಗ ಕಾದಂಬರಿ ದೇವಿಯಲ್ಲಿಗೆ ಬರುವೆನೆಂದೂ ಆವರೆಗೂ

ಯತ್ನದಿಂ ನಿಜಶರೀರಮಂ ನಿಲಿಸವೇಳ್ಪುದು ದೇವಿಯರ್

ಎಂದೂ ಹೇಳುವಂತೆ ಪತ್ರಲೇಖೆಗೆ ಬೆಸಸಿ ಆಕೆಯಲ್ಲಿಗೆ ಕಳಿಸಿ ಕೊಡುವನು. ಗೆಳೆಯನನ್ನು ಇದಿರುಗೊಳ್ಳಲು ತಾನು ದಶಪುರದ ಕಡೆ ಹೋಗುವನು.

ಸೈನ್ಯ ಬಂದಿತು; ಗೆಳೆಯನು ಬರಲಿಲ್ಲ. ಅಚ್ಛೋದ ಸರೋವರ ತೀರದಲ್ಲಿ ಆತನಿಗೆ ಏನೋ ಮಂಕುಬಡಿಯಿತಂತೆ! ಯಾರು ಏನು ಹೇಳಿದರೂ ಕೇಳದೆ ವಿರಕ್ತನಾಗಿ ಅಲ್ಲಿಯೇ ಉಳಿದುಬಿಟ್ಟಿದ್ದನಂತೆ. ಇದನ್ನು ಕೇಳಿ ಚಂದ್ರಾಪೀಡನಿಗೆ ಕಳವಳವುಂಟಾಯಿತು. ಆದ್ದರಿಂದ ಹಿರಿಯರ ಬಳಿಗೆ ಹೋಗಿ ತಾನೇ ಅವನನ್ನು ಕರೆದುತರುತ್ತೇನೆಂದು ತಿಳಿಸಿ ಮಗನ ನಡತೆಗೆ ಕೋಪಗೊಂಡ ಶುಕನಾಸನನ್ನು ಸಂತೈಸಿ ಅಚ್ಛೋದದ ಕಡೆಗೆ ಚಂದ್ರಾಪೀಡನು ಪ್ರಯಾಣ ಬೆಳಸುವನು. ಗೆಳೆಯ

ನನ್ನು ಬೇಗ ಕಾಣುತ್ತೇನೆ, ಮಹಾಶ್ವೇತೆಯನ್ನು ವಂದಿಸುವ ಭಾಗ್ಯ ದೊರೆಯುತ್ತದೆ, ಕಾದಂಬರಿಯನ್ನು ಸೇರುತ್ತೇನೆ, ತರಳಿಕೆಯೊಡನೆ ವೈಶಂಪಾಯನನಿಗೆ ಮದುವೆ ಮಾಡಿಸುತ್ತೇನೆ ಎಂದು ಆತನ ಆಸೆಗಳು ದಾರಿಯಲ್ಲಿ ಮುಗಿಲ ಗೋಪುರ ಕಟ್ಟು ತ್ತಿದ್ದುವು. ಆದರೆ ಅಚ್ಛೋದದ ಬಳಿ ಎಲ್ಲಿ ಹುಡುಕಿದರೂ ವೈಶಂಪಾಯನನ ಸುಳಿವೇ ಇಲ್ಲ. ಮಹಾಶ್ವೇತೆಯನ್ನು ಕೇಳಿ ದರೆ ಆತನ ವೃತ್ತಾಂತ ತಿಳಿದೀತೆಂದು ಆಕೆಯಲ್ಲಿಗೆ ಹೋದರೆ ಆಕೆ ಅತಿಯಾಗಿ ದುಃಖಿಸುತ್ತ ತಲೆಬಾಗಿರುವಳು. ಕಾದಂಬರಿ ಗೇನು ಕೇಡು ಸಂಭವಿಸಿತೊ ಎಂಬ ಸಂದೇಹವುಂಟಾಗಿ ತರಳಿಕೆ ಯನ್ನು ಕುರಿತು ಮೆಲ್ಲಗೆ ಇದೇನು? ಎಂದು ಕೇಳಲು ನಡೆದ ಸಂಗತಿಯನ್ನೆಲ್ಲ ಮಹಾಶ್ವೇತೆ ವಿವರಿಸುವಳು:

ಚಂದ್ರಾಪೀಡನ ವಯಸ್ಸಿನ ಚೆಲುವನೊಬ್ಬನು ಆಕೆಯನ್ನು ಆಶ್ರಮದ ಬಳಿ ಕಂಡು ಮೋಹಗೊಂಡನೆಂತಲೂ; ಎಷ್ಟು ಬಗೆ ಯಲ್ಲಿ ಅಡ್ಡಿಮಾಡಿದರೂ, ನಿರ್ಲಕ್ಷ್ಯ ತಿರಸ್ಕಾರ ತೋರಿಸಿದರೂ ಆಕೆಯ ಕಣ್ಬೊಲದಿಂದ ತೊಲಗದೆ ಸಂತತ ಸುಳಿದಾಡುತ್ತಿದ್ದ ನೆಂತಲೂ; ಒಂದು ರಾತ್ರಿ ಬೆಳುದಿಂಗಳಲ್ಲಿ ತನ್ನ ಕಥೆಯನ್ನೂ ಪುಂಡರೀಕನನ್ನೂ ನೆನಸಿಕೊಳ್ಳುತ್ತ ಆಕೆ ಏಕಾಂಗಿಯಾಗಿ ವಿಶ್ರಮಿಸುತ್ತಿರಲು ಆಕೆಯ ಬಳಿಗೆ ಉನ್ಮತ್ತನಂತೆ ಕೈಚಾಚಿ ಹೋಗಿ ಕಾಮವಿಕಾರದ ಮಾತುಗಳನ್ನಾಡಿ ತನ್ನ ಜೀವಿತ ಆಕೆಯ ಅಧೀನವೆಂದೂ ಮೊರೆಹೊಕ್ಕಿದ್ದೇನೆಂದೂ ಪ್ರತೀಕಾರ ಕಾಣದ ತನ್ನನ್ನು ಆ ಸ್ಥಿತಿಯಿಂದ ರಕ್ಷಿಸಬೇಕೆಂದೂ ಬೇಡಿದ ನೆಂತಲೂ; ಆಕೆಗೆ ಕೋಪಬಂದು ಯುಕ್ತಾಯುಕ್ತ ವಿವೇಚನೆ ಯಿಲ್ಲದೆ ಸತಿಯೆದುರು ನಿಂತು ಗಿಳಿಯಂತೆ ಗಳಹುತ್ತಿರುವ ನೀನು ಗಿಳಿಯಾಗು ಎಂದು ಆಕೆ ಶಾಪಕೊಟ್ಟಳೆಂತಲೂ;

ಕೂಡಲೆ ಅವನು ತೀರಿಕೊಂಡನೆಂತಲೂ; ಪರಿಜನರ ಮೂಲಕ ಅವನು ಚಂದ್ರಾಪೀಡನ ಗೆಳೆಯ ವೈಶಂಪಾಯನನೆಂದು ಆಮೇಲೆ ತಿಳಿಯಿತೆಂತಲೂ ಹೇಳಿ ತಲೆಬಾಗಿದಳು. ಬ್ರಾಹ್ಮಣ ಹನನ ಮಹಾಪಾತಕಿಯಾದ ತನ್ನನ್ನು ವಿಧವಿಧವಾಗಿ ಹಳಿದುಕೊಂಡಳು.

ಗೆಳೆಯನು ಮೃತಪಟ್ಟ ಸಂಗತಿಯನ್ನು ಕೇಳಿದೊಡನೆಯೇ ಚಂದ್ರಾಪೀಡನ ಎದೆ ಒಡೆಯಿತು. ಈ ಹುಟ್ಟಿನಲ್ಲಿ ಕಾದಂಬರಿಯ ಸಮಾಗಮವಾಗದುದಕ್ಕೆ ತಪಿಸುತ್ತ ಮಹಾಶ್ವೇತೆಯ ಎದುರಿಗೆ ಚಂದ್ರಾಪೀಡನು ನಿಶ್ಚೇಷ್ಟಿತನಾಗಿ ಬಿದ್ದನು. ಎಲ್ಲರೂ ತಬ್ಬಲಿಗಳಾದಂತಿದ್ದರು.

ಚಂದ್ರಾಪೀಡನು ಮಹಾಶ್ವೇತೆಯ ಆಶ್ರಮಕ್ಕೆ ಬಂದಿರುವನೆಂಬ ಸುದ್ದಿಯನ್ನು ಕೇಳಿದ ಕಾದಂಬರಿ ಆತನನ್ನು ಕಾಣಲು ಬಹಳ ಸಂಭ್ರಮದಿಂದ ಸಖಿಯರೊಡನೆಯೂ ಪತ್ರಲೇಖೆಯೊಡನೆಯೂ ಅಲ್ಲಿಗೆ ಬಂದಳು. ಅಲ್ಲಿನ ಸ್ಥಿತಿ ಗೊತ್ತಾಗಲು ಕಾದಂಬರಿ ದಿಕ್ಕೆಟ್ಟು ತಾನೂ ಜೀವಹತ್ಯಮಾಡಿಕೊಳ್ಳುವೆನೆನ್ನುತ್ತ ರಾಜಕುಮಾರನ ದೇಹವನ್ನು ಕಟ್ಟಿಕೊಂಡು ಹಲುಬುತ್ತ ಇರಲು ಚಂದ್ರಮಂಡಲದಿಂದ ದಿವ್ಯವಾಣಿಯೊಂದು ಕೇಳಿಸಿತು: ಬೇಗನೆ ಮಹಾಶ್ವೇತೆಯ ಕೆಲಸ ಕೈಸೇರುವುದು; ಪುಂಡರೀಕನ ದೇಹಕ್ಕೆ ಪುನಃ ಜೀವ ಬರುವುದು; ಚಂದ್ರಾಪೀಡನ ಜೀವ ಸದ್ಯಕ್ಕೆ ಪರಕಾಯಪ್ರವೇಶಮಾಡಿದೆ, ಅಷ್ಟೇ; ಆ ದೇಹ ನಿತ್ಯವಾದದ್ದು; ಆತನೂ ಈ ದೇಹದಿಂದಲೇ ಕೆಲವು ದಿನಗಳಲ್ಲಿ ಕಾದಂಬರಿಯಲ್ಲಿ ಕೂಡುವನು; ಎಲ್ಲ ಪ್ರಯತ್ನದಿಂದಲೂ ಅದನ್ನು ಆರಾಧಿಸಿ, ಕಾಪಾಡಿ—ಎಂದು ಹೇಳಿ ನಿಂತಿತು.

ಚಂದ್ರಾಪೀಡನ ಗತಿಯನ್ನು ಕಂಡು ಎಲ್ಲರಂತೆ ಶೋಕಗೊಂಡು ತಿಳಿವುತಪ್ಪಿದ್ದ ಪತ್ರಲೇಖೆ ತಂಪುಕಿರಣದ ಸ್ಪರ್ಶದಿಂದ ಎಚ್ಚತ್ತು ಕೂಡಲೆ ಇಂದ್ರಾಯುಧದ ಬಳಿಗೆ ಹೋಗಿ, ಹಿಡಿದಿದ್ದ ಚಾರಕನಿಂದ ಅದನ್ನು ತೆಗೆದುಕೊಂಡು, 'ವಾಹನವಿಲ್ಲದೆ ಚಂದ್ರಾಪೀಡದೇವನು ಏಕಾಕಿಯಾಗಿ ದೂರ ಹೋಗಲು ನಮ್ಮಂತಹರು ಹೀಗೆ ಇರುವುದು ಅನುಚಿತ' ಎಂದು ನುಡಿದು ಅದರೊಡನೆ ಅಚ್ಛೋದದಲ್ಲಿ ಹಾರಿಕೊಂಡಳು. ಕೂಡಲೆ, ಆಶ್ಚರ್ಯದ ಮೇಲೆ ಆಶ್ಚರ್ಯ! ಸರೋವರದಿಂದ ಕಪಿಂಜಲನೆದ್ದು ಬಂದು ಎದುರಿಗೆ ನಿಂತನು. ಆತನನ್ನು ಗುರುತಿಸಿ, ಪುಂಡರೀಕನನ್ನು ಒಯ್ದವರಾರು? ಎಲ್ಲಿ ಇರಿಸಿದ್ದಾರೆ? ಆ ವಾರ್ತೆಯೇನು? ಇಷ್ಟರವರೆಗೆ ವಿಳಂಬಿಸಿಯೂ ಒಬ್ಬರೇ ಬಂದಿರೆ, ಏನು ಕಾರಣ? ಎಂದು ಮಹಾಶ್ವೇತೆ ಕೇಳಿದುದಕ್ಕೆ ಉತ್ತರವಾಗಿ—ಆ ವ್ಯಕ್ತಿ ಚಂದ್ರ, ಲೋಕಾನುಗ್ರಹಕ್ಕಾಗಿ ಆತನು ಉದಯಿಸಿರಲು ಕಾಮಾತುರನಾಗಿ ಸಾಯುತ್ತಿದ್ದ ಪುಂಡರೀಕನು ಆತನನ್ನು ಕೋಪದಿಂದ ನೋಡಿ,

ಎಲೆ ಚಂದ್ರಹತಕ, ಮದನನ
ಬಲದಿಂದಂ ಮೇಲೆಪರಿದು ಕೊಂದಿಂತೆನ್ನಂ
ನಿಲಲರಿಯೆ; ಇರ್ಮೆ ನೀಂ ಮ
ರ್ತ್ಯ ಲೋಕದೊಳ್ ಪುಟ್ಟು ಎನುತ್ತೆ ಶಾಪಂಗೊಟ್ಟಂ.

ನಿರಪರಾಧನಾದ ತನಗೆ ಅವಿಚಾರದಿಂದ ಈ ರೀತಿ ಶಾಪ ಕೊಡಲು 'ಸುಖದುಃಖವನ್ನು ನನ್ನೊಡನೆ ನೀನು ಅನುಭವಿಸು' ಎಂದು ಆತನಿಗೆ ಚಂದ್ರನು ಮರುಶಾಪ ಕೊಟ್ಟನಂತೆ. ತನ್ನ ಕುಲದವಳಾದ ಮಹಾಶ್ವೇತೆ ಆತನನ್ನು ಪ್ರೀತಿಸಿರುವುದರಿಂದ ಆಕೆಗೋಸ್ಕರವಾಗಿ ಪುಂಡರೀಕನ ಮೇಲೆ ಕೋಪ ಬಿಟ್ಟು

ಆತನ ಶರೀರವನ್ನು ತಂದು ಕೆಡದಂತೆ ಸ್ವಂತ ತೇಜಸ್ಸಿಂದ ಪೋಷಿಸುತ್ತ ಶಾಪ ಬಿಡುವ ಕಾಲದವರೆಗೂ ಇರಿಸಿದ್ದೇನೆ, ನೀನು ಆತನ ತಂದೆಯ ಬಳಿಗೆ ಹೋಗಿ ಹೇಳು, ಆತನು ಮಗನಿಗೆ ಆಯುಷ್ಕಾಮ ಹೋಮಾದಿಗಳನ್ನು ಮಾಡುವನು— ಎಂದು ನನ್ನನ್ನು ಹಿಂದಕ್ಕೆ ಕಳಿಸಿದನು. ಗೆಳೆಯನ ಶೋಕ ದಿಂದ ಕಣ್ಣು ಕಾಣದೆ ಆಕಾಶಮಾರ್ಗದಲ್ಲಿ ಬೇಗಬೇಗ ಬರುತ್ತಿದ್ದೆ. ದಾರಿಯಲ್ಲಿ ವೈಮಾನಿಕನೊಬ್ಬನು ಬರಲು ಆತನನ್ನು ಭರದಿಂದ ದಾಟಿದೆ. ಈ ಅವಿನಯವನ್ನು ಕಂಡು ಆತನಿಗೆ ಕೋಪ ಬಂತು. ಅಗಲವಾದ ಆಕಾಶಮಾರ್ಗದಲ್ಲಿ ತನ್ನನ್ನು ಲಕ್ಷ್ಯಮಾಡದೆ ವಿದ್ಯಾಗರ್ವದಿಂದ ಕುದುರೆಯಂತೆ ದಾಟಿದೆಯಾದ್ದರಿಂದ ಭೂಮಿಯಲ್ಲಿ ಕುದುರೆಯಾಗಿ ಹುಟ್ಟಿ ಹೋಗು ಎಂದು ಆತನು ನನಗೆ ಶಾಪಕೊಟ್ಟನು. ಬುದ್ಧಿ ಪೂರ್ವಕವಾಗಿ ಅಪಚಾರಮಾಡಲಿಲ್ಲವೆಂದು ಆತನಿಗೆ ನಿಜಸ್ಥಿತಿ ಯನ್ನು ವಿವರಿಸಿದೆ. ಕರುಣೆ ಬೇಡಿದೆ. ಅಲ್ಲದೆ ಶಾಪಾಂತ ಕಾರಣವನ್ನು ತಿಳಿಸಬೇಕೆಂದು ಕೇಳಿಕೊಂಡೆ. ಆತನು ಅದಕ್ಕೆ ಯಾವನಿಗೆ ವಾಹನವಾಗಿರುವೆಯೋ ಆತನು ಬೇರೆ ಒಡಲಿಗೆ ಸಲ್ಲುವ ಸಮಯದಲ್ಲಿ ನೀನು ಅಚ್ಛೋದದಲ್ಲಿ ಮುಳುಗು, ಶಾಪ ಬಿಡುವುದು ಎಂದನು. ನಾನು, ಆತನನ್ನು ಕುರಿತು, ನನ್ನ ಗೆಳೆಯನೂ ಚಂದ್ರನೂ ಭೂಮಿಯಲ್ಲಿ ಹುಟ್ಟುವರು ; ಅವರು ಹುಟ್ಟಿದಲ್ಲಿ ನಾನೂ ಹುಟ್ಟುವಂತೆ ನೀವು ದಯೆಯಿಂದ ಮಾಡಿ ರೆಂದು ಬೇಡಿದೆ. ಚಂದ್ರನು ಚಂದ್ರಾಪೀಡನಾಗಿಯೂ ನಿನ್ನ ಸ್ನೇಹಿತ ಪುಂಡರೀಕನು ವೈಶಂಪಾಯನನಾಗಿಯೂ ಹುಟ್ಟಿ ತ್ತಾರೆ. ಚಂದ್ರಾಪೀಡನಿಗೆ ನೀನು ವಾಹನವಾಗುವೆ ಎಂದು ಆತನು ಹೇಳಿದನು. ಕಿನ್ನರಗಳ ನೆವದಿಂದ ನಿನ್ನನ್ನು ಕಾಣಿಸ ಲೆಂದು ಚಂದ್ರಾಪೀಡನನ್ನು ತಂದವನು ನಾನೆ.

—ಎಂದು ಕಪಿಂಜಲನು ತಿಳಿಸಲು ಮಹಾಶ್ವೇತೆಯ ದುಃಖ ತಾಳಲಾಗದಾಯಿತು. ' ಹಾ ಮನಃಪ್ರಿಯ ಪುಂಡರೀಕ, ಜನ್ಮಾಂತರಾವಿಸ್ಮೃತ ಮದನುರಾಗ, ಮತ್ಪ್ರತಿಬದ್ಧಜೀವಿತ, ಮನ್ಮಯ ಸಕಲ ಜೀವಿತಲೋಕ' ಎಂದು ಶೋಕ ಗದ್ಗದೆ ಯಾಗಿ

ಮುನ್ನಂ ಆದೊರ್ಮೆ ಪಾತಕಿಯೆನ್ ಅಂತಿರೆ ಕೊಂದವಳೆಂ;
ಭವಾಂತರೋ
ತ್ಪನ್ನನೆ ಆಗಿಯುಂ ಮದನುರಾಗದಿನ್ ಎಳ್ತರೆ ಮತ್ತೆ
ಕೊಂದೆನಾಂ
ನಿನ್ನನೆ; ನಿನ್ನನಿಂತು ಮುಗುಳ್ದುಂ ಮುಗುಳ್ದುಂ ಕೊಲವೇಳ್ಪ-
ದೆಂದು ಪೇಳ್
ಎನ್ನನ್ ಇದಿಂತು ಪುಟ್ಟಿಸಿದನೇ, ವಿಧಿ, ರಕ್ಕಸಿಯಂ ಮನಃಪ್ರಿಯಾ

ಎನ್ನುತ್ತ ಗೋಳಿಡುವ ಆಕೆಯನ್ನು ಕಪಿಂಜಲನು ಸಂತೈಸಿದನು. ಈ ರೀತಿಯ ಶೋಕದಿಂದ ಶ್ರೇಯಸ್ಸುಬಾರದು, ಅಭಿಲಾಷೆಯ ಸಿದ್ಧಿಗಾಗಿ ಯಾವ ಸದ್ವ್ರತವನ್ನು ನೀವಿಬ್ಬರೂ ಆಚರಿಸುತ್ತಿರುವಿರೋ ಅದನ್ನೇ ಮಾಡುತ್ತಿರಿ ಎಂದು ಹೇಳಿ ಹೊರಟುಹೋದನು. ಮಹಾಶ್ವೇತೆ ಕಾದಂಬರಿಯರು ತಾಳ್ಮೆಯಿಂದ ಸತ್ಕರ್ಮಗಳಲ್ಲಿ ನಿರತರಾಗಿದ್ದರು.

ಕಪಿಂಜಲನು ಶ್ವೇತಕೇತುಗಳಲ್ಲಿಗೆ ಹೋಗಿ ನಡೆದುದನ್ನೆಲ್ಲ ನಿವೇದಿಸುವನು. ಮಗನ ಕಾಮವೃತ್ತಿಯೂ ಅದರ ಪರಿಣಾಮವೂ ತಿಳಿದು ತಾವು ಆಯುಷ್ಕಾಮ ಯಜ್ಞ ನಡಸದ್ದರಿಂದ ಹಾಗಾಯಿತೆಂದೂ ಬೇಗನೆ ಅದನ್ನು ನೆರವೇರಿಸಿ ಆತನ ದುರ್ಗತಿಗೆ ತಕ್ಕ ಪ್ರತೀಕಾರ ಮಾಡುವೆವೆಂದೂ ಅವರು ಹೇಳುವರು. ಕಪಿಂಜಲನಿಗೆ ಗೆಳೆಯನನ್ನು ಕಂಡಲ್ಲದೆ ಜೀವ

ನಿಲ್ಲದಾಗಿ ಅವನಿರುವ ಬಳಿಗೆ ಹೋಗಲು ಗುರುಗಳ ಅಪ್ಪಣೆ ಬೇಡುವನು. ಶಾಪಗಳ ಫಲವಾಗಿ ಮಗನು ಗಿಳಿಯಾಗಿ ಹುಟ್ಟಿರುವುದನ್ನೂ ಪೂರ್ವದ ಸ್ಮೃತಿ ಇನ್ನೂ ಬಾರದಿರುವುದನ್ನೂ ಜ್ಞಾನದೃಷ್ಟಿಯಿಂದ ತಿಳಿದು ಇನ್ನು ಕೆಲವು ದಿನ ತಡೆಯುವಂತೆ ಹೇಳಿದವರು—ಒಂದು ದಿನ, ಕಪಿಂಜಲನನ್ನು ಕುರಿತು 'ಜಾಬಾಲಿಗಳ ಅನುಗ್ರಹದಿಂದ ನಿನ್ನ ಗೆಳೆಯನಿಗೆ ಈಗ ನೆನಪು ಮರಳಿದೆ, ನೀನು ಹೋಗಿ ತಂದೆ ಮಾಡುವ ಹೋಮ ಮುಗಿಯುವವರೆಗೂ ತಡೆದಿರು, ಅವನ ತಾಯಿಯೂ ಯಜ್ಞಕಾರ್ಯದಲ್ಲಿ ಪರಿಚರ್ಯೆ ಮಾಡುತ್ತ ಇದನ್ನೇ ಹೇಳಿ ಕಳಿಸಿದ್ದಾಳೆಂದು ತಿಳಿಸು' ಎನ್ನುವರು. ಕಪಿಂಜಲನು ಬೇಗ ಜಾಬಾಲಿಗಳ ಆಶ್ರಮಕ್ಕೆ ಬಂದು ಗಿಳಿಯನ್ನು ಕಂಡು ಎತ್ತಿ ಮುದ್ದಾಡಿ ತನ್ನ ಸ್ನೇಹವನ್ನು ತೋಡಿಕೊಳ್ಳುವನು. ಗಿಳಿಗೆ ತಂದೆ ತಾಯಿಯರ ಸಂದೇಶವನ್ನೂ ಧೈರ್ಯವನ್ನೂ ಹೇಳಿ ಗುರುಗಳಲ್ಲಿಗೆ ಹಿಂದಿರುಗುವನು.

ಪೂರ್ವವೃತ್ತಾಂತ ತಿಳಿದ ಮೇಲೂ ಮಹಾಶ್ವೇತೆಯ ಮೇಲಿನ ಮೋಹ ಮುರಿಯದೆ ದಿನದಿನಕ್ಕೆ ಹೆಚ್ಚುತ್ತಿರುವುದನ್ನು ಕಂಡ ಗಿಳಿ ಅಲ್ಲಿಗೆ ಹಾರಿ ಹೋಗಲು ಬಯಸಿ ದಾರಿಯಲ್ಲಿ ಇದ್ದಕ್ಕಿದ್ದಹಾಗೆ ಬೇಡರ ಕೈಗೂ ಅವರ ಒಡತಿ ಚಂಡಾಲ ಕನ್ನೆಯ ಅಂಕೆಗೂ ಸಿಕ್ಕಿಬೀಳುತ್ತದೆ. ಗಿಳಿಯ ಪಶ್ಚಾತ್ತಾಪಕ್ಕೆ ಮೇರೆಯಿಲ್ಲವಾಯ್ತು. ದೇವರ್ಷಿಯ ಮಗನಾಗಿ ಹುಟ್ಟಿ ಕಾಮಿತ್ವದಿಂದ ಕೀಳಾಗಿ ಚಂಡಾಲರ ಕೈಗೆ ಬೀಳುವಂತಹ ದುಃಸ್ಥಿತಿಗೆ ತನ್ನನ್ನು ತಂದುಕೊಂಡುದಕ್ಕಾಗಿ ಮರುಗುತ್ತ ಪ್ರಾಯೋಪವೇಶ ಮಾಡಿ ಜೀವ ಬಿಡಬೇಕೆಂಬ ಯೋಚನೆ ಬಂದಿತು. ಚಂಡಾಲ ಕನ್ಯೆ ಬಹುವಿಧದಲ್ಲಿ ತಿಳಿವಳಿಕೆ ಹೇಳಿ

ಸಮಾಧಾನ ಮಾಡಿದಳು. ಒಂದು ದಿನ ಇದ್ದಕ್ಕಿದ್ದಂತೆ ಹೊಲೆವಳ್ಳಿ ರಾಜಧಾನಿಯಾಯಿತು. ಚಂಡಾಲ ಕನ್ಯೆ ದಿವ್ಯಾಂಗನೆಯಾದಳು. ಹಸಿತೊವಲ ಪಂಜರ ಚಿನ್ನರನ್ನದ ಪಂಜರವಾಯಿತು. ಇದನ್ನು ಕಂಡು ಗಿಳಿ ಆಶ್ಚರ್ಯಪಡುತ್ತಿರಲು ಆ ಕನ್ಯೆ ಅದನ್ನು ತೆಗೆದುಕೊಂಡು ಬಂದು ಶೂದ್ರಕಮಹಾರಾಜ ನಿಗೆ ಕಾಣಿಕೆಯಾಗಿ ಅರ್ಪಿಸುವಳು. ಪೂರ್ವಜನ್ಮ ಸಂಸ್ಕಾರ ದಿಂದ ಎಲ್ಲ ವಿದ್ಯೆಗಳೂ ಮರಳಿ ಸಿದ್ಧಿಸಿದ್ದುದರಿಂದ ಗಿಳಿ ರಾಜಾಶೀರ್ವಾದ ಮಾಡಿ ಎಲ್ಲರಿಗೂ ವಿಸ್ಮಯ ಉಂಟು ಮಾಡುವುದು.

ಇಷ್ಟಾದರೂ ಗಿಳಿಗೆ ಗೊತ್ತಿಲ್ಲ—ಚಂಡಾಲ ಕನ್ಯೆ ಯಾರೆಂಬುದು. ಆಕೆಯನ್ನು ಕರಸಿ ಕೇಳಲು ಗಿಳಿಯೇ ವೈಶಂಪಾಯನ–ಪುಂಡರೀಕ; ತಾನು ಪುಂಡರೀಕನ ತಾಯಿ–ಲಕ್ಷ್ಮಿ; ಈ ಹುಟ್ಟಿನಲ್ಲಿ ಕೂಡ ಕಾಮಮೋಹಿತನಾಗಿ ತಂದೆಯ ಯಜ್ಞಕರ್ಮ ಮುಗಿಯುವ ಮುಂಚೆ ಎಲ್ಲಿ ಪುನಃ ಅವಿವೇಕ ದಿಂದ ಕೇಡಿಗೆ ಒಳಗಾಗುವನೊ ಎಂಬ ಅಂಜಿಕೆಯಿಂದಲೂ ಅವನಿಗೆ ವಿರಕ್ತಿ ಹುಟ್ಟಿಸಬೇಕೆಂದೂ ತಾನು ಈ ರೀತಿ ಮಾಡಿದೆ; ಮರ್ತ್ಯಲೋಕ ಸಂಪರ್ಕ ಪರಿಹಾರಾರ್ಥವಾಗಿ ಚಂಡಾಲವೇಷ ತಳೆದು ಬಂದಿದ್ದೇನೆ ಎಂದೂ ಯಜ್ಞ ಇಂದಿಗೆ ಮುಗಿಯುವುದ ರಿಂದ ಇನ್ನೇನೂ ಭಯವಿಲ್ಲವೆಂದೂ ಶೂದ್ರಕನೇ ಚಂದ್ರಾ ಪೀಡನಾಗಿದ್ದ ಚಂದ್ರದೇವನೆಂದೂ ಸಮಸುಖದುಃಖಿಗಳಾಗ ಬೇಕಾದ ಅವರಿಬ್ಬರೂ ಇನ್ನು ಈ ದೇಹಗಳನ್ನು ಬಿಟ್ಟು ದಿವ್ಯ ದೇಹ ಪಡೆದು ಇಷ್ಟ ಜನದೊಡನೆ ಸುಖವಾಗಿರಬಹುದೆಂದೂ

ಝುಣಿಝ್ಝುಣಿತ ಮೇಖಲಾಕಲಿತ ಹಾರ ಕೇಯೂರ ಭೂ
ಷಣ ಪ್ರಭೆ ದಿಗಂತಮಂ ಬೆಳಗೆ, ರಾಜರಾಜದ್ಗೃಹಾಂ
ಗಣ ಸ್ಥಿತ ಜನಕ್ಕೆ ವಿಸ್ಮಯಮನಾಗಿಸುತಂ ನಭೋಂ
ಗಣಕ್ಕೆ ಒಗೆದಳೆಂದು ಲಕ್ಷ್ಮಿ, ಕುಡುಮಿಂಚಿದೊಂದು ಎಂಬಿನಂ.

ಶೂದ್ರಕನೂ ಗಿಳಿಯೂ ಆ ದೇಹಗಳನ್ನು ಬಿಟ್ಟು ಸದ್ಗತಿ ಹೊಂದುವರು.

ಇತ್ತ, ಕಾದಂಬರಿಯ ಪ್ರೇಮಚರ್ಯೆಯಿಂದಲೂ ಸಂಸ್ಪರ್ಶದಿಂದಲೂ ಎದುರಿಗಿದ್ದ ದೇಹಕ್ಕೆ ಚೇತನ ಬಂದು ನಿದ್ರೆಯಿಂದ ಎಚ್ಚತ್ತಂತೆ ಚಂದ್ರಾಪೀಡನು ಏಳುವನು. ಅದರ ಸಂತೋಷದಲ್ಲಿ ಇವರಿರುವಾಗ ಆಕಾಶದಿಂದ ಪುಂಡರೀಕನು ಇಳಿದು ಬರುವನು. ಪ್ರಿಯರಿಗೆ ಎರಡೂ ಕಡೆಯ ಹಿರಿಯರ ಒಪ್ಪಿಕೆ, ಹರಕೆ ದೊರೆತು ಲೋಕೋಚಿತವಾದ ವಿವಾಹಮಂಗಳ ನೆರವೇರುವುದು. ಕಾದಂಬರಿಯ ಪ್ರಶ್ನೆಗೆ ಉತ್ತರವಾಗಿ ಪತ್ರಲೇಖೆ ಚಂದ್ರನ ಪತ್ನಿ ರೋಹಿಣಿಯೆಂದೂ ಆತನನ್ನು ಅಗಲಿರಲಾರದೆ ಆ ರೂಪದಲ್ಲಿ ಹುಟ್ಟಿ ಬಂದು ಆತನ ಶುಶ್ರೂಷೆ ಮಾಡುತ್ತಿದ್ದಳೆಂದೂ ಚಂದ್ರನು ತಿಳಿಸುವನು. ಇಷ್ಟವಾದ ವಿನೋದವಿಹಾರಸುಖಗಳಲ್ಲಿ ಉಜ್ಜಯಿನಿ, ಲಕ್ಷ್ಮೀಸರಸ್ಸು, ಚಂದ್ರಲೋಕಗಳಲ್ಲಿದ್ದುಕೊಂಡು ಎಲ್ಲರೂ ಕಲ್ಯಾಣಪರಂಪರೆಗಳನ್ನು ಪಡೆಯುವರು.

—ಸ್ಥೂಲವಾಗಿ ಇದು ಕಥೆ. ಕಥೆ ಮೊದಲಾಗುವುದು ಶೂದ್ರಕನ ಆಸ್ಥಾನದಲ್ಲಿ; ಚಂಡಾಲಕನ್ನೆ ಗಿಳಿಯನ್ನು ತಂದು ರಾಜನಿಗೆ ಒಪ್ಪಿಸುವ ಪ್ರಸಂಗದಿಂದ. ಗಿಳಿ ತಾನು ಜಾಬಾಲಿಗಳ ಆಶ್ರಮಕ್ಕೆ ಹೋಗಿ ಸೇರುವವರೆಗೂ ತನ್ನ ಕಥೆ ಹೀಗೆಂದು ರಾಜನಿಗೆ ವಿವರಿಸುವುದು. ಆಶ್ರಮಕ್ಕೆ ಒಯ್ದಾಗ ಪೂರ್ವಕಥೆ

ಅದಕ್ಕೆ ತಿಳಿದಿರಲಿಲ್ಲ. ಋಷಿ ಆ ವೃತ್ತಾಂತವನ್ನು ಮುನಿಗಳಿಗೆ ಆ ರಾತ್ರಿ ತಿಳಿಯಹೇಳಿದಾಗ ಅದಕ್ಕೂ ತಿಳಿಯುವುದು. ನಡುವೆಯ ಸಂಗತಿಗಳ ಕೆಲವು ಭಾಗ ಜಾಬಾಲಿಗಳ ಮಾತಿನಲ್ಲಿಯೂ ಕೆಲವು ಮಹಾಶ್ವೇತೆ ತರಳಿಕೆ ಮುಂತಾದವರ ಮಾತಿನಲ್ಲಿಯೂ ಮುಂದೆ ಕೆಲವು ಭಾಗ ಗಿಳಿಯ ಮಾತಿನಲ್ಲಿಯೂ ಇದೆ. ಹೀಗೆ ಹಲವರ ಬಾಯಿ ಹೊಕ್ಕು ಅವರೇ ಎದುರಿಗೆ ಬಂದು ಹೇಳುವಂತೆ ಅತಿ ಕುತೂಹಲಜನಕವಾಗಿ ಬಣ್ಣಿಸಿರುವ ಮೂರು ಜನ್ಮದ ಕಥೆ ಕಾದಂಬರಿಯ ಕಥೆ. ಕಥೆಯ ಒಳಗೆ ಕಥೆ, ಅದರೊಳಗೆ ಮತ್ತೊಂದು ಕಥೆ—ಹೀಗೆ ಹಬ್ಬಿದೆ. ಭಾರತದಲ್ಲಿ ಗದ್ಯಕಥೆಗಳ ಸಂಪ್ರದಾಯದ ಹೆಣಿಗೆ ಇದು. ಜನ್ಮಾಂತರ ಕಥೆಗಳೆಲ್ಲ ಇಷ್ಟು ಸುಂದರಮೋಹಕವಾಗಿದ್ದು ಒಂದೊಂದು ಬದುಕಿನ ಹೊಸ ದರ್ಶನವನ್ನು ತೋರಿಸುತ್ತ ಬೆಳೆದಿದ್ದರೆ ನಮ್ಮ ಸಾಹಿತ್ಯ ಸಂಪತ್ತಿಗೆ ಯಾವುದು ಸಾಟಿಯಾಗಬಲ್ಲುದಾಗಿತ್ತು ?

ಒಟ್ಟಿನಲ್ಲಿ ಇದೊಂದು ಪ್ರೇಮದ ಮಹಾಚರಿತ್ರೆ. ಇಲ್ಲಿನದು ಸೌಂದರ್ಯದ ಮತ್ತು ಕರುಣೆಯ ಪ್ರಪಂಚ. ಪುಂಡರೀಕ ಮಹಾಶ್ವೇತೆಯರ ಪ್ರೇಮ; ಕಾದಂಬರಿ ಚಂದ್ರಾಪೀಡರ ಪ್ರಣಯ; ಅವುಗಳ ಹುಟ್ಟು, ಬೆಳವಣಿಗೆ, ಪರಿಣಾಮ; ಸಂಬಂಧಿಸಿದ ಪ್ರಕೃತಿ, ವ್ಯಕ್ತಿ ವ್ಯವಹಾರಗಳ ವರ್ಣನೆ; ಉಂಟಾಗುವ ಸುಖದುಃಖದ ಅನುಭವ—ಇವು ಕಾವ್ಯವನ್ನು ತುಂಬಿವೆ. ಮೂರು ಹುಟ್ಟುಗಳ ಕಾಲ ಪ್ರಿಯರಿಗಾಗಿ ಕಾದು ತೊಳಲಿದ ಜೀವರು ತಮ್ಮ ಪ್ರೇಮಪ್ರಭಾವದಿಂದ ಇಷ್ಟಾರ್ಥ ಪಡೆದು ಹೇಗೆ ಸುಖಿಯಾಗುವರು ಎಂಬ ವಸ್ತು ಇಲ್ಲಿಯದು.

ಕಾದಂಬರಿಯ ಮೂಲ ಬೃಹತ್ಕಥೆಯಂತೆ. ಆದರೆ

ಅಲ್ಲಿನದೆಲ್ಲ ಎಷ್ಟು! ವಿಗ್ರಹಶಿಲ್ಪಿಗೆ ಸಿಕ್ಕುವ ಕಲ್ಲಿನಂತೆ. ಶ್ರೇಷ್ಠ ಕವಿಯ ಕಣ್ಣಿಗೆ ಪದಾರ್ಥ ಬಿದ್ದಕೂಡಲೆ ಅದಕ್ಕೆ ಇಲ್ಲದಿದ್ದ ಆಕೃತಿ ಮೂಡುತ್ತದೆ; ಚೆಲುವು ಹೊಮ್ಮುತ್ತದೆ; ರಸ ತುಂಬುತ್ತದೆ; ಕಲ್ಪನೆ ಕೆರಳುತ್ತದೆ. ನೆಲ, ನೀರು, ಬಾನುಗಳ ಮೇಲೆ ಹಿಂದೆ ಕಾಣದಿದ್ದ ಪ್ರಪಂಚವೊಂದು ಹುಟ್ಟಿಕೊಂಡು ತಾರೆಗಳ ತಿಳಿವನ್ನು ಅಣಕಿಸುತ್ತ ತಾನೇ ನಿಜವೆಂಬ ಭ್ರಾಂತಿ ಉಂಟುಮಾಡುತ್ತದೆ. ಎದುರ ಲೋಕ ಒರಟು, ಇದು ನಯ, ಹಸನು ಮಾಡಿದುದು, ಶೋಧಿಸಿದ್ದು, ಭವ್ಯವಾದ್ದು ಎಂಬಂತೆ ತೆಗೆದುಕೊಂಡ ಕಥೆಯನ್ನು ನಯಮಾಡಿ ರಸಕೃತಿಯಾಗಿ ಸಾವಿಲ್ಲದ ಸೌಭಾಗ್ಯವನ್ನಾಗಿಸಿದ ಕೀರ್ತಿ ಬಾಣಭಟ್ಟನದು. ಏಳನೆಯ ಶತಮಾನದಲ್ಲಿ ಹರ್ಷನ ಆಸ್ಥಾನದಲ್ಲಿ ಮಾನ್ಯನಾದ ಆತನು ತನ್ನ ಕಾಲದ ನಾಜೂಕು, ನಾಗರಿಕತೆ, ವೈಭವಗಳನ್ನು ಈ ಕಥೆಗೆ ಹಿಂಡಿದ್ದಾನೆ. ಸ್ವಂತ ಲೋಕಾನುಭವ ಮತ್ತು ಬದುಕಿನ ನೆನಪುಗಳನ್ನು ಸೇರಿಸಿದ್ದಾನೆ. ಪ್ರತಿಭೆ, ವಸ್ತುರಚನೆ, ವರ್ಣನೆ ಮತ್ತು ಕಥನಕೌಶಲದಿಂದ ಸಾಲು ಸಾಲಿನಲ್ಲಿಯೂ ಸಂತೋಷ ಉಕ್ಕಿಸುತ್ತಾನೆ.

ಅರ್ಧ ಕಾವ್ಯ ಬರೆದು ಆತನು ತೀರಿಕೊಂಡನು. ಕಥಾವಸ್ತುವನ್ನೂ ತಂದೆಯ ಹೃದಯವನ್ನೂ ಅರಿತಿದ್ದುದರಿಂದಲೂ ತಾನೇ ಕವಿಯಾದ್ದರಿಂದಲೂ ಮಗ ಭೂಷಣಭಟ್ಟನು ಅದನ್ನು ಬರೆದು ಮುಗಿಸಿದನು. ಬಾಣವಾಣಿಯ ಎದುರು ಈತನ ಕೈಚಳಕ ಎರಡನೆಯ ಮಟ್ಟದಂತೆ ಕಾಣಬಹುದು. ಅವರೆ ಕವಿತ್ವದರ್ಪದಿಂದ ಬರೆಯುತ್ತಿಲ್ಲ, ಭೀತನಾಗಿ ಬರೆಯುತ್ತಿದ್ದೇನೆ ಎಂದು ವಿನಯ ನುಡಿದರೂ ಮೇಲ್ತರದ ಕಲ್ಪನಾಶಕ್ತಿ, ಬರವಣಿಗೆ ಆತನಲ್ಲಿಯೂ ಕಾಣುತ್ತವೆ. ಕನ್ನಡಿಸಿದ ಕವಿ

ಒಬ್ಬನೇ ಆದ್ದರಿಂದ ಕರ್ನಾಟಕ ಕಾದಂಬರಿಯು ಬರವಣಿಗೆ ಒಂದೇ ಸೆಯಿಗೆಯದಾಗಿದೆ.

ಬಾಣ ಕಾದಂಬರಿ ಗದ್ಯ ಕೃತಿ. ಮೊದಲ, ನಡುವೆಯ— ಒಟ್ಟು ಎರಡು ಆರ್ಯೆಗಳನ್ನು ಬಿಟ್ಟರೆ ಉಳಿದ ಕಥೆಯೆಲ್ಲ ಗದ್ಯದಲ್ಲಿದೆ. ಆದರೆ ಎಂತಹ ಗದ್ಯ! ಗದ್ಯವೇ ಕವಿಗಳ ಒರೆಗಲ್ಲು ಎಂದು ರಸಿಕರು ಹೇಳಿ ತಲೆದೂಗುವಂತೆ ಬರೆದದ್ದು. ಮುಂದಿನ ಕವಿಪ್ರಪಂಚವೆಲ್ಲ ಬಾಣನ ಎಂಜಲು ಎಂಬಷ್ಟು ವಿವಿಧ ವಾಗ್ವಿಲಾಸವುಳ್ಳದ್ದು. ಆತನ ಕೃತಿ ಶಕ್ತಿ ಒಂದು ಬಗೆಯಲ್ಲಿ ಎಲ್ಲೆ ಮುಟ್ಟಿದೆ. ಆ ಬಗೆಯ ಬರವಣಿಗೆಯನ್ನು ಮೀರಿಸುವ ಸತ್ವ, ಬೇರೆ ಕವಿಗಳಿಗೆ ಸಾಧ್ಯವಿಲ್ಲವೆನ್ನುವಷ್ಟು ಚೆಲುವಿನ ಮಾತು, ಅರ್ಥ, ಅಲಂಕಾರ, ರಸ, ಕಥನ ಮತ್ತು ವರ್ಣನಾ ಚಮತ್ಕೃತಿ ಇವೆ ಕಾದಂಬರಿಯಲ್ಲಿ. ಆ ಸೊಬಗಿಗೆ ಸೋತ ಕನ್ನಡ ಕವಿ ನಾಗವರ್ಮನು ಕರ್ನಾಟಕ ಕಾದಂಬರಿ ಎಂಬ ಈ ಪ್ರೌಢ ಚಂಪೂ ಕಾವ್ಯ ಬರೆದನು. ದೋಷವೊಂದದ ಅಲಂಕಾರದ ವಸ್ತುಬಂಧ ಇದು ತಾನ್ ಏಂ ಮಾಡದು ಏಂ ಗೆಯ್ಯದೊ! ಎಂದು ಆತನು ಹೇಳಿಕೊಳ್ಳುತ್ತಾನೆ.

ಕವಿ ನಾಗವರ್ಮನ ವಿಷಯ ನಮಗೆ ಹೆಚ್ಚಾಗಿ ತಿಳಿಯದು. ಈತನು ಹನ್ನೊಂದನೆಯ ಶತಮಾನದವನೆಂದು ಕಾಣುತ್ತದೆ. ಬಹುಶಃ ಶೈವಬ್ರಾಹ್ಮಣನು. ಇತರ ಯಾವ ಗ್ರಂಥಗಳನ್ನು ಬರೆದನೆಂಬುದಕ್ಕಾಗಲಿ ಈತನೇ ಛಂದೋಂಬುಧಿಯನ್ನು ಬರೆದನು ಎಂಬುದಕ್ಕಾಗಲಿ ಖಚಿತ ಪ್ರಮಾಣಗಳಿಂದ ತೀರ್ಮಾನ ದೊರೆತಿಲ್ಲ. ಈತನಿಗೆ ಆಶ್ರಯಕೊಟ್ಟ ರಾಜ ಚಂದ್ರನೆಂಬವನು. ಈ ಚಂದ್ರ ಯಾರೆಂಬುದು ನಿಷ್ಕರ್ಷೆಯಾಗಿಲ್ಲ. ಭೋಜರಾಜನು ಈತನ ಕೃತಿಗೆ ಮೆಚ್ಚಿ ಕಾಳಿಂಗ,

ಕಾಂಭೋಜ, ಬಾಹ್ಲೀಕ ಜಾತಿಯ ಕುದುರೆಗಳನ್ನು ಬಹುಮಾನವಾಗಿ ಕೊಟ್ಟನೆಂದು ಕವಿ ಹೇಳುತ್ತಾನೆ. ಕವಿಗೆ 'ಬುಧಾಬ್ಜವನ ಕಳಹಂಸ' ಎಂಬ ಬಿರುದು ಇತ್ತೆಂದು ತೋರುತ್ತದೆ. ಜಾತಿಯ ಕುದುರೆಗಳ ಬಹುಮಾನ ತೆಗೆದುಕೊಳ್ಳಬೇಕಾಗಿದ್ದರೆ ಈತನು ಯೋಧನೂ ಆಗಿದ್ದಿರಬೇಕು. ಇದಕ್ಕೆ ಮಿಂಚಿದ ಸಂಗತಿಗಳಾವುವೂ ಈತನ ಸಂಬಂಧದಲ್ಲಿ ದೊರಕವು.

ಕಾದಂಬರಿಯ ಕಥೆ ಭೂಮಿ ಸ್ವರ್ಗಗಳಿಗೆ ಸಂಬಂಧಪಟ್ಟದ್ದು. ಗಂಧರ್ವ ಕನ್ಯೆ ಕಾದಂಬರಿಯ ಜೀವನದಲ್ಲಿಯೂ ಸಂಸ್ಕೃತ ಸಾಹಿತ್ಯದಲ್ಲಿ ಬಾಣಕಾವ್ಯದಂತಹ ಅಮರಕಾವ್ಯದಲ್ಲಿಯೂ ನೆಲಸಿ ವಿದಗ್ಧರ ಮೆಚ್ಚುಗೆ ಪಡೆಯಿತು. ನಾಗವರ್ಮನ ಕೃತಿಯಲ್ಲಿ ಕನ್ನಡ ಲೋಕಕ್ಕೆ ಹರಿಯಿತು. ಚಂದ್ರಸಹಚರಿಯಾಗಿ ಮೂರುಲೋಕದ ಸಂತೋಷವಾಗಿ ನಿಂತುದು ಕಾದಂಬರಿ.

ಬಾಣಕೃತಿಯಲ್ಲಿನ ಎಲ್ಲ ಗುಣವೂ ಕನ್ನಡ ಕಾವ್ಯದಲ್ಲಿದೆ ಎನ್ನುವುದು ಕಷ್ಟ. ಆದರೆ ಅದನ್ನು ರೂಪಿಸಲು ಕವಿ ಪ್ರಯತ್ನಿಸಿದ್ದಾನೆ. ಸಂಸ್ಕೃತದಲ್ಲಿ ಚೆನ್ನಾಗಿ ನುರಿತು ಮೂಲದ ಆಪ್ತಪರಿಚಯವಿದ್ದ ಕವಿ ಇದನ್ನು ಆರಿಸಿಕೊಂಡು ಗದ್ಯದಿಂದ ಪದ್ಯಕ್ಕೆ ತಿರುಗಿಸುವಾಗ್ಗೆ ಅಲ್ಲಲ್ಲಿ ವ್ಯತ್ಯಾಸಗಳು ಉಂಟಾಗಿವೆ. ಅಗತ್ಯವಾಗಿ ಕೆಲವು, ಬುದ್ಧಿಪೂರ್ವಕವಾಗಿ ಕೆಲವು. ಕವಿ ವಿವೇಚನೆ ತೋರಿಸಿ, ಕೆಲವು ಭಾಗ ಬಿಟ್ಟಿದ್ದಾನೆ; ವರ್ಣನೆಗಳಲ್ಲಿ ಕೆಲವನ್ನು ಮೊಟಕುಮಾಡಿದ್ದಾನೆ; ಕೆಲವನ್ನು ವಿಸ್ತರಿಸಿದ್ದಾನೆ. ಮೂಲದ ಚೆಲುವೆಲ್ಲ ಇಲ್ಲಿ ರೂಪಗೊಳ್ಳದಿದ್ದರೂ ಅಲ್ಲಿನ ಪ್ರೌಢಿಯಂತಹ ಪ್ರೌಢಿಯನ್ನು ಪದ್ಯಗಳಲ್ಲಿ—ವಿಶೇಷವಾಗಿ ಗದ್ಯದಲ್ಲಿ, ವರ್ಣನೆಗಳಲ್ಲಿ—ತುಂಬಿ ಮನಸ್ಸು ಮಾಡಿದ ಕಡೆ

ತಿಳಿಯಾದ ಸುಲಭವಾದ ಅಚ್ಚಗನ್ನಡದಲ್ಲಿ ಎಲ್ಲರ ಮನಸ್ಸನ್ನೂ ಒಲಿಸುವಂತೆ ಬರೆಯಬಲ್ಲನು. ಈ ಗ್ರಂಥ ಒಟ್ಟಿನಲ್ಲಿ ಮೂಲ ಕಾವ್ಯವನ್ನು ಹತ್ತಿರದಲ್ಲಿ ಅನುಸರಿಸುತ್ತದೆ. ಮೂಲದ ವೈಭವ ಗಳೆಲ್ಲ ಇಲ್ಲ; ಹಾಗೆಯೇ ಅಲ್ಲಿನ ಬೇಸರ, ಕ್ಲಿಷ್ಟತೆ, ಕೃತಕತೆ, ಜಟಿಲತೆ, ಅತಿರೇಕಗಳು ಎಲ್ಲವೂ ಇಲ್ಲಿಲ್ಲವೆನ್ನಬಹುದು. ಆದರೂ ಅದರಿಂದಲೇ ಇದಕ್ಕೆ ಜೀವ. ಕಬ್ಬಿನ ರಸ, ಬೆಲ್ಲ, ಸಕ್ಕರೆ ಎಲ್ಲ ಒಂದೇ ಮೂಲಸಾಮಗ್ರಿಯ ರೂಪಾಂತರಗಳೇ· ಒಂದರ ರುಚಿ ಮಾತ್ರ ಒಂದಕ್ಕಿಲ್ಲ. ಮೂಲದ ಚೆಲುವು ಗಾಂಭೀರ್ಯ ವಿಜೃಂಭಣಗಳು ಅದಕ್ಕೇ ವಿಶೇಷವಾದವು. ಇದರ ಗರಿಮೆ ಇದಕ್ಕಿದೆ. ನಾಗವರ್ಮನ ಚಂಪೂಕಾವ್ಯ ಕನ್ನಡಿಗರೆಲ್ಲರಿಗೆ ಪ್ರೀತಿ ಉಂಟುಮಾಡಬಲ್ಲದು. ಸ್ವಂತಕ್ಕೆ ಗೌರವ ಸಂಪಾದಿಸಿಕೊಳ್ಳಬಲ್ಲದ್ದು.

ಇಷ್ಟು ಸಾಕು.

## ೨. ಚಿತ್ರ, ಸನ್ನಿವೇಶ, ವ್ಯಕ್ತಿಗಳು

ಮಾಳವದ ಶೂದ್ರಕ ಮಹಾರಾಜನ ತೋಳಬಲ, ಕೀರ್ತಿ, ಸಮೃದ್ಧಿ ವಿಜೃಂಭಿಸಿವೆ. ಪ್ರಭುವಾಗಿ, ರಾಜ್ಯಭಾರದ ಚಿಂತೆ ಇಲ್ಲದೆಯೂ ಸತ್ವಗುಣೈಕಾಗ್ರಣಿಯಾಗಿಯೂ ಆತನು ಇದ್ದಾನೆ. ಮನ್ಮಥನಿಗೆ ಮೇಲಾದ ರೂಪ; ಹೊಸ ಯವ್ವನ; ಸಂತತಿ ಬೇಕೆಂದು ಮಂತ್ರಿಗಳು ಬೇಡುತ್ತಿದ್ದಾರೆ; ಅಂತಃಪುರದ ಚೆಲುವೆಯರು ಒಲಿದು ಬಯಸುತ್ತಿದ್ದಾರೆ. ಆದರೆ ಏಕೋ ಅರಿಯದು ಜನ—ಆತನು ಸ್ತ್ರೀಸುಖವನ್ನು ಒಲ್ಲ. ಏಕೆ ಒಲ್ಲನೆಂಬುದೇ ಶೂದ್ರಕನವರೆಗೂ ಬಂದ ಕಥಾಪ್ರವಾಹದ

ಒಯ್ಯಲು. ವಿದ್ಯಾ ವಿನೋದ, ವಾದ್ಯವಾದನ, ಸಂಗೀತ, ಚಿತ್ರಕರ್ಮ, ಬೇಟೆ, ಕಾವ್ಯರಚನೆ, ವೀರಕಥಾಪುರಾಣಶ್ರವಣ, ಮುನಿ ಶುಶ್ರೂಷೆ ಹೀಗೆ ಕಾಲಕಳೆಯುತ್ತಿದ್ದಾನೆ. ಈತನು ಒಂದು ದಿನ ಸಾಮಂತರೊಡನೆ ಓಲಗದಲ್ಲಿರಲು ಬಾಗಿಲವಳು ಬಂದು,

ಜನತಾಧೀಶ್ವರ, ಬಿನ್ನಪಂ, ತ್ರಿದಶಲೋಕಕ್ಕೇರುತಿರ್ದಾ ತ್ರಿಶಂ
ಕುನರಾಧೀಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂ ಬಿಳ್ದಳ್
ಎಂಬಿನೆಗಂ

ಚೆಲುವೆಯಾದ ಚಂಡಾಲ ಕನ್ನೆಯೊಬ್ಬಳು 'ದರ್ಶನತಾತ್ಪರ್ಯದೆ ರಾಜಕೀರ ಸಹಿತಂ ಬಂದಿರ್ದಪಳ್ ಬಾಗಿಲೊಳ್' ದಕ್ಷಿಣಾ ಪಥದವಳು ಎನ್ನುವಳು. ಆತನು ಸುತ್ತಲ ರಾಜಲೋಕದ ಮುಖ ನೋಡಿದನಂತೆ. ಆತನ ಮಾತಿಗೆ ಇದಿರಾರು? 'ದೋಷ ಮೇಂ? ಬರ್ಕೆ' ಎಂದನಂತೆ. ಆಕೆ ಬರುವಾಗ್ಗೆ ರಾಜನ ಶುಭ್ರಧವಳ[1] ವೈಭವವನ್ನು ಕವಿ ವರ್ಣಿಸುವನು. ಸಭೆ

---

[1] ಚಾಮರ, ರತ್ನ, ಮುತ್ತು, ಸ್ಫಟಿಕ, ದಂತ, ಶಂಖ, ಪಾರದ, ಚಂದ್ರೋಪಲ, ಭಸ್ಮ, ನವಮುಜ್ಜನವಾಃಕಣ, ನೊರೆ, ಮಂಜು, ಮೃಣಾಲ, ಹಂಸ, ಅಮೃತಾಂಭೋರಾಶಿ, ಸುರನದೀಶೀಕರ, ತಾರಾಚಲ, ಎಳಮಿಂಚು, ಎಳಬಿಸಿಲು, ಪೂರ್ಣೇಂದು ಕಲೆ, ತಾರಾವಳಿ, ಹರಹಾಸ, ಅನಂತಭೋಗ, ಉಗುರ-ಸುಲಿಪಲ್ಲ-ಕಣ್ಣ ಕಾಂತಿಗಳು, ಹಂಸ, ಗೌರಿ, ಮಹಾಶ್ವೇತೆ ಎಂಬ ಹೆಸರು-ಯಾವ ಬಗೆಯಲ್ಲಿ ನೋಡಿದರೂ ಈ ಕಾವ್ಯದ ತುಂಬ ವಿಶೇಷ ಲಕ್ಷಣವಾಗಿ ಒಂದು ಬೆಳ್ಗಾಂತಿಯಿದೆ. ರಾಜಪರ್ಯಂಕದ ಮೇಲೆ ಬೆಳ್ಪನೆಯ ಪಚ್ಚಡ, ಕಾದಂಬರಿಯ ಎದುರು ಚಂದ್ರಾಪೀಡನಿಗಿಡುವ ಚಿನ್ನದ ಪೀಠದ ಮೇಲೆ ಬಿಳಿಯ ಹೊದಿಕೆ, ಕಾದಂಬರಿ ನೆಮ್ಮಿ ಕುಳಿತಿರುವುದು ಆದಿವರಾಹನ ಕೋರೆದಾಡೆಯಂತೆ ಬೆಳ್ಪಗಿರುವ ಕೌಳುಡೆ, ಇತ್ಯಾದಿ.

ನಿರೀಕ್ಷಣೆಯಲ್ಲಿದೆ. ಕೈಯ ಸಂಬಳಿಗೋಲಿಂದ ರನ್ನದ ನೆಲಗಟ್ಟನ್ನು ಆಕೆ ಒಂದು ಸಲ ಕುಟ್ಟಲು ರಾಜವರ್ಗದ ಮೊಗವೆಲ್ಲ ಆ ಕಡೆ ತಿರುಗಿತು. ಆಕೆಯ ಹಿಂದೆ ಒಬ್ಬ ವೃದ್ಧ. ಮುಪ್ಪಿನಿಂದ ಆತನ ತಲೆ ನರೆತಿದೆ; ಕಣ್ಣು ಅರೆತೆರೆದ ಕೆಂದಾವರೆ; ವ್ಯಾಯಾಮದಿಂದ ಮೈ ಸಡಿಲದೆ ಇದೆ; ಮಾತಂಗನಾದರೂ ಆಕಾರ ನಿಷ್ಠುರವಲ್ಲ; ಬಿಳಿಯ ಬಟ್ಟೆ ಧರಿಸಿದ್ದಾನೆ. ಅವನ ಹಿಂದೆ ಹೊನ್ನಪಂಜರದಲ್ಲಿ ಅರಗಿಳಿಯನ್ನು ತರುತ್ತಿದ್ದ ಚಂಡಿಕೆ ಕಟ್ಟಿದ ಚಂಡಾಲ ಬಾಲಕ ಒಬ್ಬ. ಹೀಗೆ ಬಂದ ಮೂವರನ್ನೂ ನೋಡುತ್ತ ಕನ್ಯೆಯ ರೂಪಿಗೆ ಆಶ್ಚರ್ಯ ಪಡುತ್ತ ಇತ್ತು ಸಭೆ.

ಕನ್ಯೆ ರಾಜನಿಗೆ ಪೊಡಮಟ್ಟು ಗಿಳಿಯ ಗುಣಗಳನ್ನು ವರ್ಣಿಸುವಳು. ತನ್ನ ಒಡತಿ ತಂದಿರುವ ಈ ಕಾಣಿಕೆಯನ್ನು ಕೈಕೊಳ್ಳಬೇಕೆಂದು ವೃದ್ಧನು ರಾಜನನ್ನು ಬೇಡುವನು. ಪಂಜರದಿಂದ ಹೊರಗೆ ಬಂದು ಗಿಳಿ ಮರ್ಯಾದೆಯಿಂದ ಬಲಗಾಲನ್ನು ಮೇಲೆತ್ತಿ ರಾಜಾಶಿರ್ವಾದ ಮಾಡುವುದು. ಕನ್ಯೆ ಹೇಳಿದ್ದೊಂದಲ್ಲ, ನಿಜ ಬೇರೆಯಲ್ಲ. ಪ್ರೌಢವಾದ ಅದರ ಜಯಪಾಠವನ್ನು ಕೇಳಿ ಎಲ್ಲರೂ ವಿಸ್ಮಯಪಟ್ಟರು. ಆ ನಡುವೆ ಮಧ್ಯಾಹ್ನ ಸೂಚಿಸುವ ಶಂಖಪ್ರಣಾದವಾಗಲು ಸಭೆ ಹರೆಯಿತು. ಎಲ್ಲರನ್ನೂ ವಿಶ್ರಮಿಸಿಕೊಳ್ಳ ಹೇಳಿ ಗಿಳಿಯನ್ನು ರಾಣಿಯರಲ್ಲಿಗೆ ಕಳಿಸಿ ರಾಜನೂ ಮಜ್ಜನ ಭೋಜನ ವಿಶ್ರಾಂತಿಗಳನ್ನು ಬೇಗ ಮುಗಿಸಿಕೊಂಡನು. ಗಿಳಿಯ ವೃತ್ತಾಂತವನ್ನು ತಿಳಿಯಬೇಕೆಂಬ ಕುತೂಹಲ ಒತ್ತುತ್ತಿರಲು ಅದನ್ನು ತರಹೇಳುವನು. ತಂದರು. ಅಪ್ಪಣೆಯ ಮೇರೆಗೆ ದೇವಿಯರು ಗಿಳಿಗೆ ಸ್ನಾನಮಾಡಿಸಿ ಊಡಿ ಕಳಿಸಿದ್ದಾರೆಂದು ಕಂಚುಕಿ ಹೇಳುವನು.

ರಾಜ—ದೇವಿಯರ ಅರಮನೆಯಲ್ಲಿ ನಿನಗೆ ಬೇಕಾದ್ದೇನೇನನ್ನು ಆಸ್ವಾದಿಸಿದೆ ?

ಗಿಳಿ—ಏನೇನಭಿಮತವನ್ನು ಆಸ್ವಾದಿಸಿದೆನಿಲ್ಲ? ಕೋಗಿಲೆ ಕಣ್ ಕಾಂತಿಯುಳ್ಳ ನೀಲಪಾಟಲ ಜಂಬೂಫಲ ಮಧುರರಸವನ್ನು ಪಿರಿದಕ್ಕ್ತಿಯಿಂ ಮನಂತಣಿಯೆ ಕುಡಿದೆ. ಸಿಂಹ ಸೀಳಿದ ಮದ್ದಾನೆಯ ಕುಂಭಸ್ಥಳದ ರಕ್ತಸೇಚನದಿಂದ ಆದ್ರ್ರವಾದ ಮುತ್ತುಗಳಂತೆ ಎಸೆವ ದಾಡಿಮೀ ಬೀಜಗಳನ್ನು ತೆಗೆದು ರಸವನ್ನು ಸವಿದೆ. ಆಮಳಕ ಫಲಾಸ್ವಾದನೆಯಿಂದ ತೃಪ್ತಿಯಾಯಿತು. ಗಳಹಲೇನು? ಅಮೃತವಾಯಿತು. ದೇವಿಯರು ಆದರದಿಂದ ತಮ್ಮ ಕೈಯಿಂದಲೇ ಊಡಿದರು.

ರಾಜ—ನೀನು ನುಡಿದಷ್ಟೂ ನಿನ್ನ ವಿಷಯದಲ್ಲಿ ವಿಸ್ಮಯ ಹೆಚ್ಚುತ್ತಿದೆ; ನಿನ್ನ ವೃತ್ತಾಂತ ಹೇಳು: ಎತ್ತಣದು ನಿನ್ನ ದೇಶ? ಹುಟ್ಟಿದೆ ಹೇಗೆ? ಹೆಸರು ನಿನಗೆ ಯಾವನಿಂದಾಯ್ತು? ವೇದ, ಶಾಸ್ತ್ರ, ಕಲಾಸಂಪನ್ನತೆ ಹೇಗೆ ಉಂಟಾಯಿತು? ಸ್ಮೃತಿ ಹುಟ್ಟಿ ಬಂದುದೊ? ವರಪ್ರಸಾದದಿಂದಾಯ್ತೊ? ಮರಸಲು ವಿಹಂಗಮ ವೇಷಿಯಾದೆಯೊ? ಸಿಕ್ಕಿದೆ ಹೇಗೆ? ಪಂಜರಬಂಧನ ಯಾವ ರೀತಿ ಆಯಿತು? ಈ ಚಂಡಾಲರ ಸಂಗತಿ ಹೇಗಾಯಿತು? ಇಲ್ಲಿಗೆ ಹೇಗೆ ಬಂದೆ?

**ಗಿಳಿ ಹೇಳಿದ ಕಥೆ**—ವಿಧ್ಯಾಟವಿಯ ತೆಂಕಲ ಪಂಪಾ ಸರಸ್ಸಿನ ಪಡುವಿಗೆ ರಾಮಬಾಣದಿಂದ ಜರ್ಜರಿತವಾದ ತಾಳೆಯ ಗುಂಪಿದೆ. ಹತ್ತಿರ ಒಂದು ದೊಡ್ಡ ಹಳೆಯ ಬೂರುಗದ ಮರವಿದೆ. ಅದರ

ತಳಿರ್ಗಳ ಇರುಂಬಿನಲ್ಲಿ, ತುದಿಗೋಡ ಮೊದಲ್‌ಗಳ ತಾಣದಲ್ಲಿ ನಾ
ರ್ಗಳ ಪೊರೆಯಲ್ಲಿ, ಪೋಳ್ಗಳಿಡೆಯಲ್ಲಿ ಕವಲ್ ಕಣೆಯಲ್ಲಿ ಸುತ್ತಲುಂ
ಗಿಳಿಗಳ ಪಿಂಡುಗಳ್ ನೆರೆದು ಕೂಡಿಯುಂ ಅಲ್ಲಿ ಸಹಸ್ರಮುಂ ನಿರಾ
ಕುಳಂ ಅನುರಾಗದಿಂ ಪಲವು ದೇಶದೊಳ್ ಇರ್ಪುವು ಬಂದು
ಭೂಪತೀ

ಬೂರುಗದಲ್ಲಿ ಎಲೆ ಕೆಲವೇ ಆದರೂ ತುಂಬ ಗಿಳಿಗಳಿರುವುದರಿಂದ ಎಲೆಗಳಿಂದಲೇ ತುಂಬಿ ಕತ್ತಲಿಟ್ಟಂತಿದೆ. ಆದರೆ ಒಂದು ಪೊಟರೆಯ ಅಲ್ಪಾವಕಾಶದಲ್ಲಿ ಒಂದು ಮುದಿಗಿಳಿ ತನ್ನ ಹೆಂಡತಿಯೊಡನೆ ವಾಸಮಾಡುತ್ತಿತ್ತು. ಆ ದಂಪತಿಗಳ ಒಂದೇ ಮರಿ ನಾನು. ಹೆರಿಗೆಯಲ್ಲಿ ನನ್ನ ತಾಯಿ ತೀರಿಕೊಂಡಿತು. ನನ್ನ ಮೇಲಿನ ವಾತ್ಸಲ್ಯದಿಂದ ಎದೆಬೇನೆ ಅಡಗಿಸಿಕೊಂಡು ತಂದೆ ನನ್ನನ್ನು ಕಾಪಾಡಿಕೊಂಡಿತ್ತು. ಸ್ವಂತಸ್ಥಿತಿಯೊ: ಮುಪ್ಪಿಂದ ದೇಹ ಸಡಿಲವಾಗಿದೆ; ಗರಿ ಒಂದೋ ಎರಡೊ ಉಳಿದಿರುವುದು; ಬಿದ್ದು ಕುಳಿಯಾಗಿವೆ ಕಿವಿ; ಹೆಗಲು ಜೋತು ಇಳಿದಿವೆ; ಹಾರಲು ಬಲವಿಲ್ಲ. ಆದ್ದರಿಂದ

ಪಕ್ಕಿಗಳ್ ಅಲ್ಲಿ ತಿಂದುಳಿದ ನೆಲ್ಗಳ ನುಚ್ಚುಗಳಂ ಫಲಂಗಳಂ
ಪಕ್ಕದೊಳಿರ್ದ ಗೂಡುಗಳಿನ್ ಆಯ್ದು ಎನಗಿಕ್ಕುವನ್ ಅಕ್ಕ
ರಿಂದೆ; ತಾಂ
ಮಿಕ್ಕುದನ್ ಉಂಡಪಂ; ಕಡಿದು ನೆಲ್ಗಳನ್ ಆಂಟದ,
ತಾಳವಣ್ಣ ಬ
ಣ್ಣಕ್ಕೆಣೆಯಾದ ಚಂಚುಪುಟದಿಂದವೆ ಮಜ್ಜನಕಂ ಮಹೀಪತೀ

ಹೀಗಿರಲು ಒಂದು ದಿನ ಬೆಳಗಾಯಿತು. ಹುಲ್ಗಳು ಹನಿ ಕರೆದುವು. ಕಣ್ದೆರೆದುವು ನವಿಲು. ಕರಿಣಿ ಎದ್ದು ಕರ್ಣಂಗಳನ್ನು ಎಚ್ಚರಿಸಿದುವು. ಪಿಂಗಳಿಗಳು ಬಾಯ ತೆರೆದುವು. ಅರುಣನಿಗೆ ಪಲ್ಲವಕರಗಳಿಂದ ವನ ಅರ್ಘ್ಯವೆತ್ತುತ್ತಿರುವುದು

ಎಂಬಂತೆ ಹನಿವ ಹುಲ್ಲ ನೀರುಗಳೊಡನೆ ಅಲರು ಉದುರುತ್ತಿತ್ತು. ಧರ್ಮಪತಾಕೆಗಳು ಎನಿಸಿದ ಮುನಿಪರ ಅಗ್ನಿಹೋಮ ಧೂಮಗಳಂತೆ ಪಾರಿವಾಳ ನೆಗೆದುವು. ಕಮ್ಮಗೆ ತಂಗಾಳಿ ತೀಡಿತು. ಸರೋವರದಲ್ಲಿ ತುಂಬಿ ಮೊರೆದುವು. ಹರಿಣಸಮೂಹ ಕಣ್ಬಿಟ್ಟಿತು. ಸಂಚರಿಸುವ ವನಕರಿಗಳ ಕರ್ಣತಾಳ ಗಂಭೀರಧ್ವನಿ ಕೇಳುತ್ತಿರಲು ಗಂಡು ನವಿಲು ನಲಿದು ನರ್ತಿಸಿತು. ಹೊತ್ತು ಹೀಗೆ ಮೂಡಲು ದೊಡ್ಡ ಗಿಳಿಗಳು ಕುಟುಕುಗೊಳಲೆಂದು ಹೊರಗೆ ಹೋದುವು. ಗೂಡುಗಳಲ್ಲಿ ಮರಿಗಳೆಲ್ಲ ಇದ್ದರೂ ನಿಶ್ಶಬ್ದವಾಗಿ ಶೂನ್ಯದಂತಿತ್ತು. ಇತರರೊಡನೆ ಆಹಾರಕ್ಕಾಗಿ ಹೋಗಲು ಶಕ್ತಿಯಿಲ್ಲದೆ ನನ್ನ ತಂದೆ ಗೂಡಿನಲ್ಲಿಯೇ ಉಳಿಯಿತು. ಗರಿ ಹುಟ್ಟದಿದ್ದ ನಾನು ತಂದೆಯ ಬಳಿ ಉಳಿದೆ. ಅಷ್ಟು ಹೊತ್ತಿಗೆ ಕಾಡಿನ ನಿಶ್ಶಬ್ದವನ್ನು ಸೀಳಿಕೊಂಡು ವಿಂಧ್ಯವನ್ನು ನಡುಗಿಸುವಂತಹ ಬೇಟೆಯ ಅಬ್ಬರಮೊಳಗಿ ಬಂತು.[1]

ತಂದೆಯ ರೆಕ್ಕೆಯೊಳಗಿದ್ದುಕೊಂಡೇ ಅಂಜಿ ಇದನ್ನೆಲ್ಲ ಕೇಳುತ್ತಿರಲು ಇದ್ದಕ್ಕಿದ್ದಂತೆ ಶಬ್ದ ನಿಂತಿತು. ನಂಜಿನ ಮಳೆ ಕೊಂಡುಬಿಟ್ಟಂತಾಯಿತು. ಆಗ ರೆಕ್ಕೆಯೊಳಗಿಂದ ಹೊರಟೆ.

---

[1]ಚಕಿತ ಉದ್ಯತ್ ಪಕ್ಷಿ ಪಕ್ಷಸ್ವನದೊಳ್ ಆಮರ್ದ ಕೋಳಾಹಳ ಧ್ವಾನದಿಂ ಕೊರ್ವಿ, ಕರೀಂದ್ರ ಉದ್ಧೂತ ಫೂತ್ಕಾರದೆ ಪುದಿದು, ಗಾಹನೀಕ ಸುಪ್ತ ಉತ್ಥ ಸಿಂಹ ಪ್ರಕರ ಪ್ರೋನ್ನಾದದಿಂ ತಳ್ತು ಉಗತ ವನದೇವೀಜಯ ಸ್ವಾಂತ ಸಂತ್ರಾಸಕರಂ ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತ ಘೋಷಂ

ಆದರೆ ಪೊಟರೆಯಲ್ಲಿಯೇ ಇದ್ದುಕೊಂಡು ಮೆಲ್ಲನೆ ನಿಳ್ಕಿ ನಿಳ್ಕಿ ಭಯಪಡುತ್ತ ಹೊರಗೆ ನೋಡಿದೆ. ಕಿರಾತಪಡೆ ನಮ್ಮ ಕಡೆಗೇ ಬರುತ್ತಿತ್ತು. ಬೇಡರ ಒಡೆಯನೂ ಇತರರೂ ನನ್ನ ಗಿಡದ ಅಡಿಯಲ್ಲಿ ಸ್ವಲ್ಪ ವಿಶ್ರಾಂತಿ ಪಡೆದು ಹೋದರು. ಅಷ್ಟು ಹೊತ್ತಿಗೆ ಮತ್ತೊಬ್ಬ ಮುದಿ ಬೇಡನು ಆ ಬಳಿಗೆ ಬಂದನು. ಜರೆಯಿಂದ ಅವನ ಹುಬ್ಬು ಜೋಲುತ್ತಿತ್ತು. ಮುಖದ ತುಂಬ ಸುಕ್ಕು. ಗಂಟಲು ಮುರಿದತ್ತ ಸೆರೆ ಒಡೆದು ತೋರುವುವು. ಒತ್ತಿಬರುವ ಕೆಮ್ಮಿಂದ ಬೆಟ್ಟಗಳು ಬಿರಿವಂತಿತ್ತು. ಸ್ವಲ್ಪವೂ ಮಾಂಸ ಸಿಕ್ಕಲಿಲ್ಲವೆಂದು ಆತುರವುಂಟಾಗಿ ಬೂರುಗಕ್ಕೆ ಬಂದಿದ್ದನು. ಬೇಡಿದರೂ ಮಾಂಸ ಭಾಗ ಕೊಡದೆ ಇತರ ಬೇಡರು ಹೋಗಿದ್ದುದರಿಂದ ಅವನ ಕಣ್ಣುಗಳಿಂದ 'ಎಯ್ದೆ' ಹೀರುವಂತೆ, ಗೂಡುಗಳನ್ನು ಮುಟ್ಟಿ ಎಣಿಸುವಂತೆ ಮರವನ್ನು ನೋಡಿದನು. ಅನೇಕ ತಾಳ ಉನ್ನತವಾದ್ದು, ಮರ ಏರಲು ಕಷ್ಟ;—ಎಂಬುದನ್ನು ಬಗೆಯಲಿಲ್ಲ. ಬಳಸಿದ ಬಳ್ಳಿ ಹಿಡಿದು ಏರಿ ಗೂಡುಗಳಿಗೆ ಕೈಯಿಟ್ಟನು.

ಜಳಜದ ಮೊಗ್ಗೆಯಂತೆ, ಮುಗುಳಂತೆ, ಎಳಎಕ್ಕೆಯ ಕಾಯ್ಗಳಂತೆ, ಶಾ
ಲ್ಮಲಿ ಕುಸುಮುಗಳಂತೆ, ತರುನೀಡ ನಿಕಾಯದಿನ್ ಎಲ್ಲಂ ಆಗಳಾ
ಗಳೆ ಗರಿವೊಯ್ದು, ಕಣ್ದೆರೆವ, ತುಪ್ಪುಳ್ ಒಡರ್ಚುವ, ಕೆಂಪನಾಳ್ವ, ಕೋ
ಮಳ ಶುಕಶಾಬಕ ಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ

ಸಾಲದೆಂದು—

ಪರಿದುವು ಗರಿ, ಚಂಚುಗಳುಂ
ಮುರಿದುವು, ತಲೆನಡುಗುತಿರ್ದುವು ಎನ್ನದೆ ತರದಿಂ
ಬರಿಗೆಯ್ದು ತಿರ್ದನ್ ಆ ಮಾ
ಯ್ದ ಅರಗುಲಿ ಕರ್ವೇಡನ್ ಅಲ್ಲಿ ಮುದುಗಿಳಿಗಳುಮಂ

ತೆಗೆವುದು, ಗಂಟಲು ಮುರಿವುದು, ನೆಲಕ್ಕೆ ಬೀಸಾಡುವುದು ಇದೇ ಕೆಲಸ ಅವನಿಗೆ. ಪ್ರಾಣಾಪಾಯ ಬಂದದ್ದು ತಂದೆಗೆ ಗೊತ್ತಾಯಿತು. ಶಕ್ತಿಕುಂದಿ ಕಣ್ಣೀರಿಡುತ್ತ, ದಿಕ್ಕೆಟ್ಟು ನನ್ನನ್ನು ನೋಡಿ 'ಮಗನೆ, ನಿನ್ನನ್ನು ಇನ್ನಾರು ಕಾಯುಲಾಪರು?' ಎಂದು ಬಿಸುಸುಯ್ಯುತ್ತ ಬಂದ ಸಂಕಟಕ್ಕೆ ಮರುಗುತ್ತ ಇಷ್ಟು ಬಗೆಯಲ್ಲಿ ಸಾಕಿದ ಮರಿಯೊಡನೆ ತನಗೂ ಸಾವು ಬಂದುದಕ್ಕೆ ಬೆದರಿ, ಸೈರಿಸಲಾರದೆ, ತೊಡೆಯಲ್ಲಿ ನನ್ನನ್ನು ಇರುಕಿಕೊಂಡು ಹರಿದ ರೆಕ್ಕೆಗಳಿಂದಲೇ ಮುಚ್ಚಿ ಮರೆ ಮಾಡಿ, ಮೋಹದಿಂದ ತಂದೆಯಿರಲು ಪಾಪಿಬೇಡನು ಅಲ್ಲಿಗೂ ಬಂದು ಕೈಯಿಟ್ಟನು.

ಕಾಡಹಂದಿಗಳ ಬಲ್ಕೆಣದಿಂದ ಆ ಕೈ ಹೊಲಸಂಟಿ ನಾರುತ್ತಿತ್ತು. ಬಿಲ್ಲಹಗ್ಗದ ಪೆಟ್ಟು ಬಿದ್ದು ಆದ ಹುಣ್ಣುಗಳಿಂದ ತೊರೆವ ನೆತ್ತರ ಕೈ ನಡುಗುತ್ತಿತ್ತು. ಕಾಳಸರ್ಪದಂತೆ, ಕಾಲ ದಂಡದಂತೆ ಇದ್ದ ಅದನ್ನು ನೀಡಿ, ತಂದೆ ಕೀಳಿಡೆ ಇಡೆ, ಒಮ್ಮೆಗೇ ಅದರ ಗಂಟಲು ಮುರಿದನು. ತಂದೆ ನೆಲಕ್ಕೆ ಬೀಳುವಾಗ ಗರಿಯೊಳಗೆ ಇದ್ದ ನಾನು ಬೇಡನ ಕಣ್ಣಿಗೆ ಬೀಳಲಿಲ್ಲ. ಗಾಳಿಯಲ್ಲಿ ತೂರಿ ದೂರದ ತರಗೆಲೆಯ ರಾಸಿಯುಲ್ಲಿ ಬಿದ್ದುದರಿಂದ ಉಳಿದುಕೊಂಡೆ. ಆಮೇಲೆ ಮರದಿಂದ ಇಳಿದು ನೆಲದ ಮೇಲೆ ಚೆದರಿ ಬಿದ್ದ ಶುಕ ಸಮೂಹವೆಲ್ಲವನ್ನೂ ಬೇಗ ಮೂಟೆ ಕಟ್ಟಿ ನಡುಬೆನ್ನು ಇಳಿವಂತೆ ಹೊತ್ತು ಅವನು ಹೊರಟು ಹೋದನು.

ಸಾಯದೆ ಉಳಿದ ನನಗೆ ಭಯ, ಆಯಾಸ, ಶೋಕಗಳಿಂದ ದಿಕ್ಕುತೋರದಾಯಿತು. ಹಾರಲು ಅರಿಯೆ. ಬಾಯಿ ಬತ್ತುತ್ತಿದೆ. ಚಲಿಸಿದರೆ ತರಗೆಲೆ ಗಿರಿಕೆನ್ನುವುದು. ಅದು ಕೇಳಿಸಿದರೆ ಬೇಡನು ಹಿಂದಕ್ಕೆ ಬಂದನೇನೊ ಎಂಬ ಭೀತಿ. ಹೀಗಿದ್ದರೂ ಮೆಲ್ಲನೆ

ಎದ್ದು ಸುತ್ತಲೂ ನೋಡಿ ಒಬ್ಬರೂ ಕಾಣದಿರಲು ಎದೆ ನೀವಿಕೊಂಡು ನೀರೆಡೆಗೆ ಹೋಗಲು ಉದ್ಯೋಗಿಸಿದೆ. ತಂದೆ ಹಾಗೆ ಸತ್ತಿದ್ದರೂ ಸ್ವಂತ ಬಳಲಿಕೆ ಬಾಯಾರಿಕೆಗಳಿಂದ ಕಂಗೆಟ್ಟ ನನ್ನನ್ನು ಕಂಡು ನನಗೇ ಬೇಸರವಾಯಿತು; ವಿಷಾದವಾಯಿತು. ಪ್ರಾಣ ಉಳಿಸಿಕೊಳ್ಳಬೇಕೆಂಬಾಸೆ ಜೀವಿಗಳಿಗೆ ಎಷ್ಟು ಹೆಚ್ಚಿನದು ಎಂಬುದು ಆಗ ತಿಳಿಯಿತು. ಆದರೂ ಬಿಸಿಲ ಬೇಗೆ ಹೆಚ್ಚಾಗಿ ನೀರಡಿಕೆಯಿಂದ ಸಾಯುವಂತಾಗಿತ್ತು.

ಇಷ್ಟು ಹೊತ್ತಿಗೆ ಹಾರೀತನೆಂಬ ಋಷಿಕುಮಾರನು ಅಲ್ಲಿಗೆ ಬಂದವನು ನನ್ನ ಸ್ಥಿತಿಯನ್ನು ನೋಡಿ ಮರುಕಗೊಂಡು ತಂಪು ತಳಿದು, ನೀರು ಕುಡಿಸಿ, ತಾವರೆ ಎಲೆಯ ನೆರಳಿನಲ್ಲಿಟ್ಟದ್ದು, ತಾನು ಮಧ್ಯಾಹ್ನಿಕ ಕ್ರಿಯೆಮಾಡಿಕೊಂಡು ನನ್ನನ್ನು ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋದನು. ನನ್ನನ್ನು ಕಂಡು ಅಲ್ಲಿನ ಋಷಿ ಜಾಬಾಲಿಗಳು ಒಂದು ನಿಮಿಷ ಧ್ಯಾನಿಸಿ ಪುಣ್ಯ ಜಲದಿಂದ ತೊಳೆಯುವಂತೆ ಶಾಂತ ದೃಷ್ಟಿಗಳಿಂದ ನನ್ನನ್ನು ನೋಡಿದರು :

ಈತಂ ಮುನ್ನಿನ ಭವದೊಳ್
ನೀತಿಯನುಳಿದೆಸಗಿ ಮೋಹದಿಂದಂ ತಿರ್ಯಕ್
ಜಾತಿಗೆ ಬಿಳ್ದು ಓರಂದದಿನ್
ಈತೆರದಿಂ ಕರ್ಮಫಲಮನ್ ಉಂಡಪನಲ್ತೇ

—ಎಂದು ಮಾತ್ರ ಆಗ ಹೇಳಿ, ಆ ರಾತ್ರಿ ನನ್ನ ಕಥೆಯನ್ನೆಲ್ಲ ವಿವರಿಸಿದರು !

ನಾನು ಪುಂಡರೀಕ ವೈಶಂಪಾಯನ; ಚಂದ್ರಾಪೀಡನು ಚಂದ್ರ; ನಮಗಾಗಿ ಮಹಾಶ್ವೇತೆ ಕಾದಂಬರಿಯರು ವ್ರತ ಹಿಡಿದು ಕಾದಿದ್ದಾರೆ. ಗೆಳೆಯ ಕಪಿಂಜಲನು ನನಗೋಸ್ಕರ

ಕುದುರೆಯಾಗಿ ಹುಟ್ಟಿ ಕಷ್ಟಪಡಬೇಕಾಯಿತು. ಎಲ್ಲ ಹುಟ್ಟುಗಳಲ್ಲಿಯೂ ಹೆತ್ತವರಿಗೆ, ಜೊತೆಯವರಿಗೆ, ಪ್ರಿಯರಿಗೆ ನನ್ನಿಂದ ದುಃಖವೇ ಆಯಿತು ಎಂದು ಆಗ ತಿಳಿದೆ– ಎಂದು ನುಡಿಯುವುದು.

ಕಾದಂಬರಿಯಲ್ಲಿನ ಚಿತ್ರಸನ್ನಿವೇಶಗಳನ್ನು ವರ್ಣಿಸುತ್ತ ಹೋದರೆ ಮಿತಿಯೆಲ್ಲಿ? ಅವಿವೇಕವಾಗುತ್ತದೆ. ಈ ಕವಿಗೆ ಕಾಣದ ಬಣ್ಣವಿಲ್ಲ, ವಸ್ತುವಿಲ್ಲ; ಕೇಳಿಸದ ಶಬ್ದವಿಲ್ಲ. ಪ್ರೌಢಿ, ಜೀವನದರ್ಶನ, ನಯ, ಗಾಂಭೀರ್ಯ, ರಸೋತ್ಪಾದನಕೌಶಲ ಆತನಲ್ಲಿ ಯಥೇಷ್ಟವಾಗಿವೆ. ಮುದಿಗಿಳಿಯ ಸವೆದ ಕೊಕ್ಕು, ಮರಿಗಳ ತುಪ್ಪುಳು, ತೊವಲ ಪಂಜರ, ಬಿಸಿಲ ಜಳ, ಬೇಡರೊಡೆಯನ ನಾಗರ ಹೆಡೆಯಂತಹ ಎದೆಮಾಟ, ಹಳದಿಕಲ್ಲ ಹಾಸು, ಕುದುರೆ ಸಂಗೀತಕ್ಕೆ ಒಲಿವ ರೀತಿ, ಅಭಿಸಾರ, ಆತಿಥ್ಯದ ನಯ, ವೈಮಾನಿಕ ದರ್ಪ, ಶಿವಪೂಜೆ, ತಾಂಬೂಲಪ್ರಧಾನ, ಪ್ರೇಮ ಸೂಚನೆಗಳು, ಚೆಲುವರ ಬಗೆ ಬಗೆಯ ಚಲುವು, ಮುತ್ತಿಟ್ಟು ಗಂಡನನ್ನು ಸಾವಿಂದ ಎಚ್ಚರಿಸುವ ಸುಕೃತಿ, ಮಾನವರ ಮನಸ್ಸಿನ ಆಳ, ಭಾವವಿಲಾಸ, ವ್ಯವಹಾರ ವಿನಯ, ಭೂ ಸ್ವರ್ಗ ಆಕಾಶಗಳು, ಪಶು ಪಕ್ಷಿ ದೇವಮಾನವರು – ಮಾಸದ ನೆನಪಾಗಿ ಉಳಿಯಬಲ್ಲ ಇಂತಹ ಚಿತ್ರಗಳು ಗ್ರಂಥದಲ್ಲಿ ತಾವೇ ತಾವು. "ಕವಿ ತನ್ನ ಮಾಯದ ಕುಂಚವನ್ನು ಬೀಸಿದನೆಂದರೆ ಅಸಂಭವವಾದ್ದು ಸಂಭವವಾಗಿ ತೋರುವುದು. ಗಿಳಿ ಕವನ ಕಟ್ಟುವುದು .... ಕವಿ ಕಲ್ಪಿತ ಪಾತ್ರಗಳು ಚರಿತ್ರೆಯ ವ್ಯಕ್ತಿಗಳಂತೆ, ನಿಜವಾಗಿ ನೋಡಿದ ಜನರಂತೆ, ಚಿರಸ್ಥಾಯಿಯಾಗಿ ವಾಚಕರ ಹೃದಯದಲ್ಲಿ ನೆಲೆಗೊಳ್ಳುವರು."

* * * *

ಕಾದಂಬರಿ ದೇವಿಯ ಪರಿಚಯ ನಮಗಾಗುವುದು ಪುಸ್ತಕ

ಸುಮಾರು ಅರ್ಧ ಮುಗಿದ ಮೇಲೆ. ಚಂದ್ರಾಪೀಡನು ಬಂದದ್ದು, ಅನುರಾಗ ಹುಟ್ಟಿದ್ದು, ಅಗಲಬೇಕಾಗಿ ಬಂದುದು, ಪ್ರಣಯದ ಒರದಿ ಮತ್ತು ಸ್ಪಷ್ಟೀಕರಣ, ಇನ್ನೇನು ಆತನನ್ನು ಕಂಡೇನು ಆತನು ತನ್ನವನಾದಾನು ಎಂಬ ಆತುರದಿಂದ ಆಕೆ ಆಶ್ರಮಕ್ಕೆ ಬಂದಾಗ ಎದೆಬಿರಿದು ಆತನು ನೆಲದಲ್ಲಿ ಒರಗಿರುವುದನ್ನು ಕಂಡದ್ದು, ಮುಂದಕ್ಕೆ ಆಶ್ರಮದಲ್ಲಿಯೇ ಉಳಿದು ಆತನ ದೇಹವನ್ನು ಕಾಪಾಡಿ ಶಾಪಮುಗಿದು ಆತನು ಬದುಕಿಕೊಳ್ಳಲು ಸುಖದಲ್ಲಿ ಸೇರಿ ಬೆರೆದದ್ದು—ಇದು ಆಕೆಯ ಕಥೆ. ಮಹಾಶ್ವೇತೆ ಪುಂಡರೀಕರ ಕಥೆ ಇದಕ್ಕೆ ಒಂದು ಕೈಮೇಲಾಗಿಯೇ ಪ್ರಬಲಿಸುತ್ತದೆ. ಕಾದಂಬರಿಯ ಪ್ರೇಮಕ್ಕೆ ಮುಂಚೆ ಮೊದಲಿಟ್ಟು ಆಕೆಗೆ ಸುಖದೊರೆತಮೇಲೆ ಮುಗಿಯುವ ಅದು ಕಾದಂಬರಿಯ ಕಥೆಗೆ ಪೂರ್ವರಂಗ. ಈಕೆಯ ಸುಖದುಃಖಗಳಿಗೆ ಹಿನ್ನೆಲೆ; ಕಾರಣ. ಅದೂ ಸಹಜವೇ. ಇಲ್ಲದಿದ್ದರೆ ಕಾದಂಬರಿಯ ಕಥೆ ಬೇರೆಯಾಗುತ್ತಿತ್ತು. ಪುಂಡರೀಕನ ಸ್ಥಿತಿ ಆ ವಿಪರೀತಕ್ಕೆ ಹೋಗದೆ ಇದ್ದಿದ್ದರೆ ಅವನು ಚಂದ್ರನಿಗೆ ಏಕೆ ಶಾಪಕೊಟ್ಟು ಸಾಯುತ್ತಿದ್ದ ? ಎಂದರೆ, ಚಂದ್ರಾಪೀಡನು ಹುಟ್ಟುವ ಅಗತ್ಯವೇ ಇರಲಿಲ್ಲವಾಗಿ ಆತನು ಮಹಾಶ್ವೇತೆಯ ಬಳಿಗೆ ಹೋಗುವುದೂ ಆಕೆ ಕಾದಂಬರಿಯ ಬಳಿಗೆ ಆತನನ್ನು ಒಯ್ಯುವುದೂ ಕಾದಂಬರಿಗೆ ಪ್ರೀತಿ ಹುಟ್ಟುವುದೂ ಆಗದ ಸಂಗತಿಗಳು. ಹೀಗೆ ಆಕೆಯ ಪ್ರಣಯಚರಿತ್ರೆಗೆ ಮಹಾಶ್ವೇತೆಯ ಕತೆ ಮೂಲವಾಗುತ್ತದೆ. ಚಂದ್ರ ಪುಂಡರೀಕರು ಒಬ್ಬರೊಬ್ಬರಿಗೆ ಶಾಪವಿಟ್ಟು ಮನುಷ್ಯರಾಗಿ ಹುಟ್ಟಿಬಂದಮೇಲೆ ಕಾದಂಬರಿದೇವಿಯ ಪ್ರಕರಣ ಮೊದಲಿಡುವುದು. ಕಥೆಯ ಒಂದು ವಿಶೇಷವೆಂದರೆ : ಮುಖ್ಯರಾದ ಗಂಡುಪಾತ್ರಗಳು

ಜನ್ಮಾಂತರಕ್ಕೆ ಹೋದರೂ ಮಹಾಶ್ವೇತೆ ಕಾದಂಬರಿಯರು ಇದ್ದಂತೆ ಇರುವುದು. ಪ್ರೇಮ ಫಲಿಸಲು ಕಾದಿರುವ ಅವರ ಹುಟ್ಟು, ಕುಲ, ಪ್ರಣಯ ಸಂಪತ್ತಿ, ಅವರಿಗೆ ದೊರೆತ ಭರವಸೆ ಎಲ್ಲ ಅಂಥವು. ಚಂದ್ರನಿಂದ ನಂಬಿಕೆ ಬಾರದಿದ್ದರೆ ಅವರು ಬದುಕಿರುತ್ತಿದ್ದರೋ ಇಲ್ಲವೊ ! ಚಂದ್ರನಿಗೆ ಪುಂಡರೀಕನನ್ನು ಕುರಿತು ಅಸಮಾಧಾನವಾದರೂ ಮರುಕವಿದೆ. ತನ್ನ ಕುಲದವಳಾದ ಮಹಾಶ್ವೇತೆಯ ಪ್ರೇಮ ಪಡೆದವನ ಶುಭಕ್ಕಾಗಿ, ಆಕೆಯ ಪುಣ್ಯದಿಂದ, ಕೋಪ ಬಿಟ್ಟು ಉಪಕಾರಮಾಡುವನು. ಯಾವಾಗ ಮಹಾಶ್ವೇತೆಗೆ ನಂಬಿಕೆ ಕೊಟ್ಟನೋ ತನ್ನ ಅಂಶವಾದ ಚಂದ್ರಾಪೀಡನಲ್ಲಿ ಮೋಹಗೊಂಡ ಸತಿಗೂ ನಂಬಿಕೆಕೊಡುವ, ಇಬ್ಬರನ್ನೂ ಕಾಪಾಡುವ ಹೊಣೆ ಆತನದಾಯಿತು.

ಈ ಬಗೆ ನೋಡಿದರೆ ಕಥೆಯಲ್ಲಿ ಕಾರ್ಯಮಾಡುವ ಪ್ರಧಾನ ಸತ್ವ ಚಂದ್ರನದು. ನೇರವಾಗಿ, ಬಳಸಾಗಿ ಈ ಪ್ರಣಯ ಸಾಮ್ರಾಜ್ಯದಲ್ಲಿ ಅವನದೆಯೆ ಕೈವಾಡ. ಕರ್ನಾಟಕ ಕಾದಂಬರಿಯಲ್ಲಂತೂ ಮೊದಲ ಪದ್ಯದಿಂದ ಹಿಡಿದು ಕೊನೆಯವರೆಗೂ ಸಂದೇಹಕ್ಕೆ ಅವಕಾಶವಿಲ್ಲದಂತೆ ಇದು ವ್ಯಕ್ತವಾಗುತ್ತದೆ, ಮಂಗಳಾಚರಣದ ಪದ್ಯ ಚಂದ್ರನಿಗೆ ಮೀಸಲು. ಕವಿಗೆ ಆಶ್ರಯ ಕೊಟ್ಟ ರಾಜನು ಚಂದ್ರ. ಕಥೆಯ ಉದ್ದಕ್ಕೂ ಚಂದ್ರಾಪೀಡನು ನೃಪರೂಪ ಚಂದ್ರ. ರೂಪದಲ್ಲಿ ಹೇಗೆ ಚಂದ್ರನಂತೆಯೊ ನೃಪರೂಪದಲ್ಲಿ ಹುಟ್ಟಿರುವ ಚಂದ್ರನೂ ಅವನೇ ಆಗಿದ್ದಾನೆ. ಪುಂಡರೀಕನ ಕಾಮತಾಪ ಹೆಚ್ಚಲು ಆತನಿಗೆ ಬೇಗೆಯಿಟ್ಟು ಸುಡುವುದು ಚಂದ್ರಕಾಂತಿ. ಸತಿಯರಿಗೆ ಆಶ್ವಾಸನ ಕೊಟ್ಟು ಅದರಂತೆ ಎಲ್ಲವನ್ನೂ ನಡಸುವವನೂ

ಚಂದ್ರ; ಬೆನ್ನುಹತ್ತಿದ ಕಪಿಂಜಲನಿಗೆ ನಡೆದುದನ್ನೆಲ್ಲ ತಿಳಿಸಿ ಶ್ವೇತಕೇತುಗಳಲ್ಲಿಗೆ ಹೋಗಿ ಶಾಂತಿಕರ್ಮಮಾಡ ಹೇಳಿ ಕಳಿಸುವವನು ಚಂದ್ರ. ವೈಶಂಪಾಯನನಿಗೆ ಮಹಾಶ್ವೇತೆಯಲ್ಲಿ ಕಾಮ ಮೋಹ ಬಲಿದಿರಲು ಮನ್ಮಥ ಸಹಾಯನಾದ ಈ ಚಂದ್ರಮನೇ ಪುನಃ ಅದನ್ನು ಕೆರಳಿಸಿ ಆಕೆಯ ಶಾಪಕ್ಕೆ ಎಡೆಕೊಡುವುದು. ಪುಂಡರೀಕನಿಗೆ ಮುಡಿಪಾದ ತನ್ನ ಸತೀತ್ವದ ಮೇಲೆ ಆಣೆಯಿಟ್ಟು ಆಕೆ ಶಾಪಕೊಟ್ಟದ್ದೂ ಚಂದ್ರನ ಸಾಕ್ಷಿ ಬೇಡಿಯೇ.

ಇದೂ ನ್ಯಾಯವೆ: ಚಂದ್ರ ಮಹಾಶ್ವೇತೆಯರೇ ಪುಂಡರೀಕನನ್ನು ಉದ್ಧಾರಮಾಡಬೇಕಾಗಿದೆ. ಅವನು ನೆರವಾಗಬೇಕು; ಇವಳು ದೊರೆಯಬೇಕು. ಇಲ್ಲವಾದರೆ ಪುಂಡರೀಕನಿಗೆ ಬದುಕಿಲ್ಲ. ಪ್ರಿಯನ ಸಾವಿಗೆ ಕಾರಣಳಾದೆ, ಬ್ರಾಹ್ಮಣ ಹನನ ಪಾತಕಿಯಾದೆ, ಮರುವುಟ್ಟಲ್ಲಿ ಕೂಡ ಬೇಡಿ ಬಂದ ಪ್ರಾಣಪ್ರಿಯನಿಗೆ ಶಾಪವಿಟ್ಟು ಕೊಂದೆ—ಎಂದು ಆಕೆ ಎಷ್ಟೇ ತನ್ನನ್ನು ತೆಗಳಿಕೊಂಡರೂ ಈಗಿನ ದೇಹಗಳು ಕಳೆದು ಮತ್ತೊಂದು ಜನ್ಮ ಮುಗಿಯುವವರೆಗೂ ಅವರಿಗೆ ಬಿಡುಗಡೆಯಿಲ್ಲ. ಪ್ರಿಯ ಸಮಾಗಮವಿಲ್ಲ. ಯಾರಿಗಾಗಿ ಬಂಧನವೋ ಅವಳೇ ಕಟ್ಟನ್ನು ಒಡೆಯುವ ಸಾಧನವಾದ್ದು ಇಬ್ಬರಿಗೂ ಶುಭವೇ. ಪುಂಡರೀಕನಾಗಿ ಮರಳಿ ಬದುಕಿಬಂದ ಹೊರತು ಆಕೆಯ ಒಲವಿಗೆ ಸಿದ್ಧಿಯಿಲ್ಲ. ಅದಕ್ಕಾಗಿಯೇ ಆಕೆಯ ತಪಸ್ಸು.[1] ಇತ್ತ ಶಾಪದಿಂದ ಚಂದ್ರಾಪೀಡನಿಗೂ ಬಿಡುಗಡೆ ಬರಬೇಕು .ಅದರ ಹೊರತು ಗೆಳತಿ ಕಾದಂಬರಿಗೆ ಸುಖವಿಲ್ಲ. ಆದ್ದರಿಂದಲೇ

[1] ಆ ತಪಸ್ಸು ಸಿದ್ಧಿಸುವುದರಲ್ಲಿ ಸಂದೇಹವಿಲ್ಲ, ಕಪಿಂಜಲನೂ ಆ ರೀತಿ ವಿಶ್ವಾಸಕೊಟ್ಟು ಹೋಗಿದ್ದಾನೆ.

ಅವರಿಬ್ಬರಿಗೂ ಉಪಾಯ ಒಂದೇ. ವಿಧಿಯ ಪ್ರಭಾವಕ್ಕೆ ಸಿಕ್ಕಿಕೊಂಡು ಬಳಲುವ ತಂಗಿ ಕಾದಂಬರಿಯ ಪ್ರೀತಿಯನ್ನು ಹಣ್ಣುಮಾಡಿಸುವುದೂ ಮಹಾಶ್ವೇತೆಯ ಪಾಲಿಗೆ ಬೀಳುತ್ತದೆ. ಆಕೆಯಂಥ ಸತ್ವಕ್ಕೂ ನಿಷ್ಠೆಗೂ ಅಸಾಧ್ಯವಾದುದಿಲ್ಲ ಎಂಬಂತೆ ಆಕೆಯ ಉದಾರ ಚರಿತೆ ಚಿತ್ರಿತವಾಗಿದೆ.

ಎರಡು ಜೊತೆ ಪಾತ್ರಗಳಲ್ಲಿಯೂ ಸಾಮ್ಯ ಎಷ್ಟಿದೆಯೊ ಅಷ್ಟು ಅಸಾಮ್ಯ ಇದೆ. ಹೊರಲಕ್ಷಣಗಳನ್ನು ನೋಡಿದರೆ ಎಲ್ಲರೂ ದೇವಲೋಕಕ್ಕೆ ಸೇರಿದವರು. ಅಥವಾ ಸೇರಬೇಕಾದವರು. ಅವರ ಪ್ರೇಮಕಥೆಯೂ ಗತಿಯೂ ಸುಮಾರು ಒಂದೇ ಕ್ರಮದಲ್ಲಿ ಬೆಳೆವವು: ಕಾಣುವುದು, ಕಂಡೊಡನೆ ಪ್ರೀತಿ, ಅಗಲಿಕೆ, ನೋವು, ಗಂಡಿನ ಸಾವು, ಎರಡು ಹುಟ್ಟು ಇವರಿಗೆ ಕಳೆದ ಮೇಲೆ ಪ್ರಿಯರು ಕೂಡುವುದು. ಹುಟ್ಟಲ್ಲಿ ಹೇಗೆಯೊ ಅದೃಷ್ಟದಲ್ಲಿಯೂ ಹಾಗೆಯೇ ಮಹಾಶ್ವೇತೆ ಕಾದಂಬರಿಯರು ಗೆಳತಿಯರು. ಕವಿ ಇದನ್ನೆಲ್ಲಾ ವರ್ಣಿಸುವುದು ಒಟ್ಟು ಒಂದೇ ರೀತಿಯಲ್ಲಿ.

ಇನ್ನು ಅಸಾಮ್ಯದ ಅಂಶಗಳನ್ನು ನೋಡೋಣ: ಪುಂಡರೀಕ ಋಷಿಯ ಮಗ. ತಂದೆಯನ್ನು ಲಕ್ಷ್ಮಿ ಮೋಹಿಸಿದಂತೆ ಮಹಾಶ್ವೇತೆ ಇವನನ್ನು ಮೋಹಿಸಿದಳು. ಆದರೆ ಇಲ್ಲಿ ಇವನು ಅತ್ಯನುರಕ್ತ. ತಾಯದು ಚಪಲವಾದರೆ ಇವನದು ದಾರುಣ ಕಾಮ; ಕೆಣಕಿ ವಿಧಿಯನ್ನೇ ತಲೆಯಮೇಲೆ ತಂದುಕೊಂಡದ್ದು. ಹುಟ್ಟುತ್ತ ಬಂದ ಅಲ್ಪಾಯುವನ್ನು ನಿವಾರಿಸಲು ತಂದೆ ಹೋಮಾದಿಗಳನ್ನು ಮಾಡಲಿಲ್ಲ. ಎರಡನೆಯ ಹುಟ್ಟಿನಲ್ಲಿ ಮಗನ ಅವಿನಯವನ್ನು ಕಂಡ ಶುಕನಾಸನು ವೈಶಂಪಾಯನನನ್ನು ಶಪಿಸಿದ.

ಮಹಾಶ್ವೇತೆ ತಪಸ್ವಿನಿ. ಅಲೌಕಿಕ ದೃಢತೆ, ಮಹೋನ್ನತಿ ಇವೆ ಆಕೆಯಲ್ಲಿ. ಹಿರಿಯ ಹೆಂಗಸೆಂಬ ನಾಡಾಡಿ ಕಲ್ಪನೆ ಆಕೆಗೆ ಸಾಲುವುದಿಲ್ಲ. ಇತ್ತ ಪ್ರಿಯನಿಷ್ಠೆಯಾಗಿ, ಸುಕುಮಾರಿಯಾಗಿ, ಗುಣಗಳ ನೆಲೆಯಾಗಿ ಕಾದಂಬರಿಯೂ ಇದ್ದಾಳೆ. ಆದರೂ ಈಕೆ ತಂಗಿ, ಮಹಾಶ್ವೇತೆ ಅಕ್ಕ. ಅಕ್ಕನ ಗತಿಯನ್ನು ತಂಗಿ ಅನುಸರಿಸಲು ಅಥವಾ ಆ ಗತಿಯಲ್ಲಿ ತನ್ನನ್ನು ತೇಲಿಬಿಡಲು ಹೋಗಿ ಅರಿಯದೆ ಅದರ ಸುಳಿಯಲ್ಲಿ ಸಿಕ್ಕಿಕೊಳ್ಳುವ ಅಬಲೆ ಕಾದಂಬರಿ. ಹಿರಿಯ ಗ್ರಹವನ್ನು ಉಪಗ್ರಹ ಅನುಸರಿಸುವಂತೆ ಆಕೆಯ ಗತಿ. ವನಾಂತರ ಸರೋವರಗಳ ಎಡೆಯಲ್ಲಿ–ಪ್ರಕೃತಿಯ ತೆರೆದ ಮಹಾವರಣದಲ್ಲಿ ಹುಟ್ಟಿ, ಆಶ್ರಮ, ವ್ರತ, ಭಕ್ತಿ, ವೈರಾಗ್ಯಗಳಲ್ಲಿ ಎಡೆ ಊರಿ ಬೆಳೆದ ಪ್ರೇಮಶಕ್ತಿ ಮಹಾಶ್ವೇತೆಯ ದಾದರೆ ಕಾದಂಬರಿಯ ಪ್ರೇಮ ಲೌಕಿಕಕ್ಕೆ ಸಲ್ಲುವ ಚೆಲುವಿನದು. ಅರಮನೆ, ಕ್ರೀಡಾಶೈಲ, ಉಪವನ, ಹಿಮಗೃಹಗಳಲ್ಲಿ ಅದರ ಸಂಚಾರ. ಮೃದು ಊಳಿಗ, ಭೋಗ, ಐಶ್ವರ್ಯ, ಕಲೆ, ಕ್ರೀಡಾಕರ್ಮ, ಶೈತ್ಯೋಪಚಾರ, ಕಳಶ, ಕನ್ನಡಿ, ವೀಳೆಯ, ತಾಂಬೂಲರಾಗ, ಸುಗಂಧ, ತಾವರೆಯೆಲೆ, ಶಿಲಾಪಟ್ಟ, ಮಾಲತೀಕುಸುಮಮಾಲೆ, ಸುಯ್ಯೆಲರಿಂ ಪಾರಿದಪವು ಎನಿಪ ದುಕೂಲಗಳು, ಮುತ್ತಿನಸರ, ಛತ್ರ, ಚಾಮರ, ದಿಂಬು, ಹಂಸತೂಲಿಕಾತಲ್ಪ, ವೀಣಾವೇಣುವಾದನ, ಭಾರತ ಪಠನ ಇವು ತುಂಬಿದ ಚೆಲುವಿನ ಒಳಲೋಕ.[1] ಇಲ್ಲಿ ಎಲ್ಲವೂ

---

[1] ಈಕೆ ಮದನವೇದನೆಯು ಅವಿನ್ನಾಣಗಳನ್ನು ಕಳಿಸಿದ ಪರಿಯನ್ನು ನೋಡಿ :

ಪಸುರೆಸೆವ ಪಾಲಡಕೆಯ ಗೊಂಚಲು; ಖಚರಕಾಮಿನಿಯರ ಕದಂಪಿನ ಬೆಳ್ಪನ್ನು ಅಪ್ಪುಕಯ್ದು ಕಪ್ಪುರವಳ್ಳಿಯ ಬಿಳಿಯೆಲೆಯ

ಲಲಿತ, ಕೋಮಲ, ಮಧುರ. ಎರಡರ ಪರಮಾವಧಿ ಸೌಭಾಗ್ಯವೂ ದೊರಕುವುದಾದರೂ ಮಹಾಶ್ವೇತೆಯದು ಧೀರ ಮೂರ್ತಿ; ಕಾದಂಬರಿಯದು ಕೋಮಲಾಂಗನೆಯ ಮಧುರ ಲಲಿತವೃತ್ತಿ.

ಇನ್ನೊಂದು ವಿಶೇಷ : ಆಶ್ರಮದಲ್ಲಿ ಕಾದಂಬರಿಯೆದುರಿಗೆ ಅಚೇತನವಾದರೂ ಚಂದ್ರಾಪೀಡನ ದೇಹವಿದೆ. ಚಂದನ ಪುಷ್ಪಾದಿಗಳಿಂದ ಅರ್ಚಿಸಿ ಕಾಪಾಡುತ್ತಿರಲು ಅದಕ್ಕೆ ಕ್ರಮ ಕ್ರಮವಾಗಿ ಜೀವಕಳೆ ಏರುವುದು ಕಣ್ಣಮುಂದಿನ ನೋಟ. ಮಹಾಶ್ವೇತೆಯ ಪ್ರಿಯನು ಎದುರಿಗಿಲ್ಲ. ಅವನ ಒಡಲನ್ನು ಬೇರೆ ಲೋಕಕ್ಕೆ ಒಯ್ದಿದ್ದಾರೆ;–ನಿಜವೋ ಸುಳ್ಳೊ ಆತನು ಬದುಕಿ ಬರುವುದು ! ವೈಶಂಪಾಯನ ಪ್ರಸಂಗದಲ್ಲಿ ಆಕೆಯ ಸತ್ವ ಪುನಃ ಪರೀಕ್ಷೆಗೆ ಗುರಿಯಾಗುವುದು ಬೇರೆ.

ಹೀಗೆ ಇವರ ಜೊತೆಚಿತ್ರಗಳು ಎರಡು ಬಗೆಯ ಸೋದರ ಪ್ರಪಂಚಗಳು. ಚಂದ್ರಾಪೀಡ ಪುಂಡರೀಕರ ಗುಣ ವೃತ್ತಿ ಶೀಲಗಳಲ್ಲಿಯೂ ಹೀಗೆಯೇ ಹೋಲಿಕೆ, ವ್ಯತ್ಯಾಸ ಕಾಣು ತ್ತವೆ. ಪತ್ರಲೇಖೆ ಕಪಿಂಜಲರು ಸಲ್ಲಿಸುವ ಕೆಳೆತನದ ಸೇವೆ ಯನ್ನೂ ಸಾಮ್ಯದಲ್ಲಿ ಉಪರಂಗವಾಗಿ ತೋರಿಸಬಹುದು.

**ಮಹಾಶ್ವೇತೆ**—ಮಹಾಶ್ವೇತೆ ಇರುವುದು ಸಿದ್ಧಾಯತನದಲ್ಲಿ;

---

ವೀಳೆಯ : ಎಳ ಪೆರೆಯ ಮುರಿಗಳನ್ನು ಏಳಿಸುವ ಕಪ್ಪುರದ ಪಳುಕು ಗಳು ; ಕತ್ತುರಿಯ ಕಂಪಿಂದ ಸೊಂಪುತಳೆದ ಮಲಯಜವಿಲೇಪ. ಇವನ್ನು ತಾವರೆಯ ನೂಲಿಂದ ಸುತ್ತಿದ್ದಾರೆ; ಸಿರಿಕಂಡದ ಉರುಳಿ ಯನ್ನು ಹತ್ತಿಸಿದ್ದಾರೆ; ಮೃಣಾಳನಾಳ ವಲಯದಿಂದ ಮುದ್ರಿಸಿ ನಳಿನೀ ಪತ್ರಪುಟದಲ್ಲಿ ಇಟ್ಟಿದ್ದಾರೆ !

ಆದರ ಮೇಲೆ ಇರ್ಪು ಪೊರೆದ ದುಗುಲದ ಬಾಸಣಿಗೆ ಮುಚ್ಚಿದೆ.

ವ್ರತಚರ್ಯೆಯಲ್ಲಿ ; ದಕ್ಷಿಣಾಮೂರ್ತಿಯನ್ನು ಆಶ್ರಯಿಸಿದ ಭಕ್ತಿಯಲ್ಲಿ; ಪುಂಡರೀಕ ಮಾಲೆಗಳಿಂದ ಎಂಬಂತೆ ಕಣ್‌ನಟ್ಟು (ಶಿವನನ್ನು) ಅರ್ಚಿಸುತ್ತ ಇರುವಾಗ; ಚಂದ್ರಾಪೀಡನೂ ನಾವೂ ಆಕೆಯನ್ನು ಕಾಣುವ ಹೊತ್ತಿಗೆ ಆಕೆಯ ಸಂತೋಷದ ಕಾಲ ಮುಗಿದುಹೋಗಿದೆ.

ಈ ಕಾವ್ಯದ ಎಲ್ಲ ಮಕ್ಕಳಂತೆ ಮನೆಗೆ ಒಬ್ಬಳೇ ಮಗಳಾಗಿ ಹುಟ್ಟಿ ಆರೈಕೆಯಲ್ಲಿ ಬೆಳೆದವಳು. ಆಕೆಯ ಮನಃಶಕ್ತಿ ವಿಲಕ್ಷಣವಾದುದು. ಸ್ವಂತ ತಂದೆತಾಯಿಯರಿಗೂ ಚಿತ್ರರಥಾದಿಗಳಿಗೂ ಆಕೆಯನ್ನು ಕಂಡರೆ ಗೌರವ. ಯಾರೂ ಆಕೆಯ ಮಾತನ್ನು ತೆಗೆದುಹಾಕರು. ಕುಲ, ವಿದ್ಯೆ, ಶೀಲಗಳ ಬೆಲೆ ಆಕೆಗೆ ತಿಳಿದಿದೆ. ಲೋಕಮರ್ಯಾದೆ ಗೊತ್ತು. ಹಿರಿಕಿರಿಯರೊಡನೆ, ಊಳಿಗದವರೊಡನೆ, ಆಗಂತುಕರೊಡನೆ ತಕ್ಕಂತೆ ನಡೆಯಲು ಅರಿತವಳು. ಎಳೆಯ ವಯಸ್ಸಾದರೂ ಅಂಕುಶವಿಲ್ಲದೆ ಬೆಳೆದವಳಾದರೂ ಪ್ರೇಮದ ತೊಳಲಿಗೆ ಈಡಾದಾಗ ತನ್ನನ್ನು ನಿಯಾಮಿಸಿಕೊಳ್ಳಲು ಬಲ್ಲಳು. ವಿಧಿಸೂತ್ರಕ್ಕೆ ಎರಡು ಜೀವ ಕಟ್ಟುಬಿದ್ದು ತಮ್ಮ ಶಕ್ತಿಗೆ ಮೀರಿದ ಸೆಳೆತಕ್ಕೆ ಸಿಕ್ಕಿಕೊಂಡದ್ದರಿಂದ ಇವಳ ಬಾಳಿಗೆ ನೋವು ಬಂತು. ಕುಗ್ಗಿ ನಿರ್ಬಲಳಾದಳೇನು ? ಆ ಭರದಲ್ಲಿ ಇನಿಯನ ಒಡಸಲ್ಲಬೇಕೆಂಬ ಯೋಚನೆಯೇನೊ ತೀವ್ರವಾಗಿ ಉಂಟಾಯಿತು. ಆದರೆ ಆಸೆಗೂ ಚಂದ್ರತರಳಿಕೆಯರ ಆಶ್ವಾಸನಕ್ಕೂ ಕಿವಿಗೊಟ್ಟಳು. ಚಂದ್ರನಂತಹವರ ನುಡಿ ಬಂಜೆಯಾಗದೆಂದು ಗೆಳತಿ ಹೇಳಿದುದು ಯುಕ್ತವಾಗಿ ಕಂಡಿತು. ಇಷ್ಟಾದಮೇಲೆ ಮನೆಗೂ ಲೋಕಸುಖಕ್ಕೂ ಮನಸ್ಸು ಮರಳಿ ಒಲಿಯಲಿಲ್ಲ. ಅದನ್ನು ಬೇರೆಕಡೆಗೆ ತೆತ್ತಾಗಿದೆ. ಲಜ್ಜೆಯೇನು ಬಂತು ? ಒಡಲು, ಬದುಕು ಋಷಿಕುಮಾರನ ಒಡವೆ.

ಇನ್ನೇಕೆ ಅರಮನೆ, ತಂದೆ ತಾಯಿ, ಊಳಿಗದವರು, ಸುಖ ? ಆದ್ದರಿಂದಲೇ ತಂದೆಯ ಬೋಧೆ, ತಾಯ ಕಂಬನಿ, ಇಬ್ಬರ ಬೇಡಿಕೆ ಯಾವುವೂ ಆಕೆಯನ್ನು ತಿರುಗಿಸಲಿಲ್ಲ. ಪದಾರ್ಥ ಅನಿತ್ಯ ; ಸಂಸಾರ ನಿಸ್ಸಾರ; ದೈವ ನಿಷ್ಠುರ; ತನ್ನದು ಮಂದಪುಣ್ಯ ; ಬಂದ ವ್ಯಸನ ಪ್ರತೀಕಾರವಿಲ್ಲದ್ದು ; ಸ್ನೇಹ ಬಹುಲವಾದ ದುಃಖ ತರತಕ್ಕದ್ದು–ಒಂದು ರೀತಿ ಇದು ಹಿಂದೂಧರ್ಮದ ಸಾರ ಎಂದು ತಿಳಿದು,

ಮನಮಂ ನಿಗ್ರಹಿಸುತ್ತ, ಅಸದ್ವಿಷಯದತ್ತಲ್ ಪೊರ್ದದಂತಾಗೆ ಮಾ
ಡಿ, ನಿರುದ್ಧೇಂದ್ರಿಯೆಯಾಗಿ ಬಂಧು ಜನಮಂ ತಾಯ್ತಂದೆ
ಯಂ ಪತ್ತುವಿ
ಟ್ಟು (ಎ) ನಗಿನ್ನೊರ್ವರುಂ ಏವರ್ ಎಂಬ ಬಗೆಯಂ ನಿಶ್ಚೈಸಿ,
ಲೋಕೈಕನಾ
ಥನನ್ ಆಗಳ್, ಅನಾಥೆಯೆಂ, ಶರಣೆನುತ್ತ ಆಶ್ರೈಸಿದೆಂ
ಸ್ಥಾಣುವಂ.

ಹೀಗಾಗಿಯೆ ಚಂದ್ರಾಪೀಡನು ಮೊದಲು ಕಂಡಾಗ ‘ ಅಮಥಿತ ಉದಧಿ ಜಲಸಂಪದಂ ಇವ ! ಅಂತಃಪ್ರಸನ್ನಾಂ’ ಆಗಿ ಆಕೆ ಕಾಣಿಸಿದ್ದು. ಈ ಧೈರ್ಯ, ತಾಳ್ಮೆ ಸ್ವಲ್ಪವಾದರೂ ಪುಂಡರೀಕನಿಗೆ ಇದ್ದಿದ್ದರೆ ಅವನ ಪಾಡು ದೀನವಾಗಬೇಕಾಗಿರಲಿಲ್ಲ ; ಅವನು ಸಾಯಬೇಕಾಗಿರಲಿಲ್ಲ. ಇಬ್ಬರಿಗೆ ಸಾಲುವಷ್ಟು ಸಂಯಮ ಆಕೆ ಒಬ್ಬಳಲ್ಲಿ ಇದ್ದುದರಿಂದಲೇ ಆಕೆಯ ವರ್ಚಸ್ಸು ಭವ್ಯವಾಯಿತು. ಒಂದು ಗಂಟೆಗೆ ಕಡಮೆಯ ಅವಕಾಶದಲ್ಲಿ ಹುಟ್ಟಿದ ಪ್ರೇಮ ಹಣ್ಣಾಗಿ ಸಾವಿಲ್ಲದ ಸತ್ವವಾಯಿತು. ಆಕೆಯನ್ನು ಕೀರ್ತಿಗೂ ಕಾಂತಿಗೂ ಎತ್ತಿತು; ಪ್ರಿಯನನ್ನು ಉದ್ಧಾರಮಾಡಿತು. ಲೋಕಕ್ಕೆ ಸ್ಥೈರ್ಯ ತಪಸ್ಸುಗಳ ಮೂರ್ತಿಚಿತ್ರ ಕೊಟ್ಟಿತು.

ಆಕೆಯ ಸಂತತ ಧ್ಯಾನ ಪುಂಡರೀಕನನ್ನು ಕುರಿತದ್ದು. ನೋವಿರಲಿ ಸಾವು ಬರಲಿ ಒಲವೆಲ್ಲ ಆತನಿಗೆ ಮುಡಿಪು. ಕಾಮಾತುರದಿಂದ ಅವನು ತೀರಿಕೊಳ್ಳಲು ತಾನೇ ಅದಕ್ಕೆ ಕಾರಣಳಾದೆನಲ್ಲ ಎಂಬ ಬೇಗೆ ಆಕೆಯನ್ನು ತಾಪಸಿಯಾಗಿ ಮಾಡಿತು. ಅದೇ ಕಾಮವೃತ್ತಿಯಿಂದ ಉನ್ಮತ್ತನಂತೆ ವೈಶಂಪಾಯನನು ಆಕೆಯ ಬಳಿಗೆ ಬರುತ್ತಿದ್ದಾಗ ಆಕೆ ಎಣಿಸುತ್ತಿದ್ದುದು ಪುಂಡರೀಕನನ್ನು; ಅವನ ವಾರ್ತೆಯನ್ನು ತಾರದೆ ತಡೆದಿರುವ ಕಂಪಿಜಲನನ್ನು; ಪುಂಡರೀಕನೊಡನೆ ಸೇರುವೆಯೆಂದು ಹೇಳಿ ಹೋಗಿದ್ದ ಚಂದ್ರವಾಣಿಯನ್ನು.

ಆದರೆ ವೈಶಂಪಾಯನನೇ ಪುಂಡರೀಕನೆಂದು ಅರಿಯಳು. ಈ ಸನ್ನಿವೇಶದಲ್ಲಿ ನಟ್ಟ ವಿಷಮತೆ ದುರಂತವಾದ್ದು. ಆದರೆ ಸಂಸ್ಕಾರ ವಶದಿಂದ ಅವನಿಗೆ ಉಂಟಾದ ನೆನಪು, ಮಂಕು, ಮಂಪರ ಆಕೆಗೂ ಉಂಟಾಗಿ ಸಹಾನುಭೂತಿ ಬರಬಾರದಿತ್ತೆ ಎಂದು ಕೇಳುವವರಿಗೆ ಮಹಾಶ್ವೇತೆಯ ನಿಷ್ಠೆ ಅರ್ಥವಾಗದು ಎನ್ನಬೇಕು. ಕಾಮವೇಗ ತಡೆಯಲಾರದೆ ಮರಳಿ ಮರಳಿ ಸತ್ತು ಹುಟ್ಟುತ್ತಿರುವವನು ಅವನು. ಅದು ಪ್ರೇಮವಾಗಿ ಆಕೆಗೆ ತಕ್ಕುದಾಗಬೇಕಾದರೆ ಪುಂಡರೀಕನೇ ಚೊಕ್ಕ ಬಂಗಾರವಾಗಿ ಆಕೆಯಲ್ಲಿಗೆ ಬದುಕಿ ಬರಬೇಕು. ಹಾಗಾದರೆ ಮಾತ್ರ ಆಕೆಯ ಒಲವಿಗೆ ಸಫಲತೆ. ವೈಶಂಪಾಯನ ಶರೀರದಲ್ಲಿ ಪುಂಡರೀಕನು ಪರಪುರುಷ. ಅವನಿಗೆ ಬಂದ ಮೂಕ ಮಮತೆಯೂ ಬಯಕೆಯೂ ಆಕೆಗೆ ಬರಲಿಲ್ಲ. ಆದ್ದರಿಂದಲೇ ಅವನಾರು, ಎತ್ತಲಿಂದ ಬಂದ, ಏನು ಕೇಳುತ್ತಿರುವನು ಎಂಬುದು ಬೇಕಾಗದೆ ಮೌನದಿಂದ ಆಕೆ ಒಂದು ದೆಸೆಗೆ ತೊಲಗಿದ್ದು. ಆಕೆಗೆ ಆಗ ಕೌತುಕ ಉಳಿದಿರಲಿಲ್ಲ. ಸುಖದ ನುಡಿ ಬೇಕಾಗಿರಲಿಲ್ಲ. ಆದ್ದರಿಂದಲೇ ಭಯಗೊಂಡು

ಎಲೆ, ಕೇಡಾಯ್ತೆನಗೆ ಓವೊ, ಮತ್ತಂ ಇವನೆನ್ನಂ ಕಯ್ಯೊಳಂ
ಬಂದು ಮು
ಟ್ಟಲೊಡಂ ಪತ್ತು ಬಿಡಲ್ಕೆವೇಳ್ಕುಂ ಅಸುವಂ; ಮೈಯೊಡ್ಡಿ
ದೆಂ ದುಃಖಸಂ
ಕುಲಕೆ ಓರಂತಿರೆ; ಪುಂಡರೀಕನನೆ ಮತ್ತಂ ಕಾಣ್ಬೆ ನಾನ್
ಎಂದೆ; ನಿ
ಷ್ಫಲಮಾಯ್ತುಕ್ಕಟಾ ಮಂದಭಾಗ್ಯೆಗೆ ಎನಗೆ ಇಂತೀ ಪ್ರಾಣ
ಸಂಧಾರಣಂ

ಎನ್ನುವಳು. ಅವನ ನುಡಿ ಸತಿ ಕೇಳಲಾಗದದು. ಕೇಳಿದೊಡನೆ ನೆತ್ತಿಯಲ್ಲಿ ಉರಿ ಮುಸಗಿದಂತಾಯಿತು. ಕಿನಿಸು ಕೈಗಣ್ಮಿತು. ಕಣ್ಗಳಿಂದ ಉಗುತರುವ ಕಂಬನಿ ಕಿಡಿಗಳಿಂದ ಅವನನ್ನು ಉರಿಸುವಂತೆ ನೋಡುತ್ತ ಆವಿಷ್ಟೆಯಂತೆ ತನ್ನನ್ನು ತಾನರಿಯದೆ

ನುಡಿವನ್ನಂ ಎನ್ನನೀಪರಿ
ಸಿಡಿಲೇತಕೆ ಕೆಡೆದುದಿಲ್ಲ ನಿನ್ನಯ ಸಿರದೊಳ್ ?
ಉಡುಗಿದುದಿಲ್ಲಂ ಉಸಿರ್ ? ನೂ
ರ್ಮಡಿಯೆನಲ್ ಈ ಜಿಹ್ವೆ ಬಿರಿದುದಿಲ್ಲ ದುರಾತ್ಮಾ

–ಎಂದು ಚಂದ್ರಾಭಿಮುಖಿಯಾಗಿ ಕಯ್ಗಳನ್ನು ಮುಗಿದು 'ಮಹಾಭಾಗ, ಸಕಲಭುವನಚೂಡಾಮಣಿಯಪ್ಪ ರೋಹಿಣೀ ರಮಣ, ಪುಂಡರೀಕನನ್ ಆಂ ನೋಡಿದಂದಿನಿಂ ಮತ್ತೊರ್ವ ಪುರುಷನಂ ಮನದೊಳಾದೊಡಂ ಭಾವಿಸದಿರ್ದುದು ನನ್ನಿಯಪ್ಪೊಡೆ ಈ ಅಳೀಕಕಾಮಿ ಗಿಳಿಯಾಗಿ ಪುಟ್ಟುಗೆ' ಎನ್ನುವಳು. ಪುಂಡರೀಕನು ಬೇಟದ ಆರ್ಯೆಯನ್ನು ಕಳಿಸಿದ್ದ; ಅವನಿಗಾಗಿ ಕಪಿಂಜಲನು ಬಂದು ಪ್ರಣಯಭಿಕ್ಷೆ ಬೇಡಿದ್ದ. ಈ ಹುಟ್ಟಿನಲ್ಲಿ ತಾನೆಯೆ

ಪಲುಂಬಿ ಮರೆವೊಕ್ಕೆನಾಂ, ನಿನಗಧೀನಂ ಈ ಜೀವಿತಂ,
ವಿಲಂಬಿಸದೆ ರಕ್ಷಿಸೆನ್ನನ್, ಆರಿಯೆಂ ಪ್ರತೀಕಾರಮಂ

ಎಂದು ಬೇಡುತ್ತಾನೆ. ಕುಂದದೆ ಅಡಗದೆ ನಡೆದಿದೆ ಈ ಬೇಟ–ಜನ್ಮ ಜನ್ಮಾಂತರಗಳಲ್ಲಿ. ಬೇಟ ಕೈಗೂಡುವ ಕಾಲ ಮಾತ್ರ ಇನ್ನೂ ಬಂದಿಲ್ಲ.[1]

ತನ್ನ ಕಷ್ಟ ಗೆಳತಿಗೇಕೆ ಹರಡಬೇಕು ? ತಂಗಿಯ ತೀರ್ಮಾನಕ್ಕೆ ತಾನೇ ಕಾರಣವಾದ್ದರಿಂದ ಆಕೆಯನ್ನು ತಿರುಗಿಸುವ ಭಾರವೂ ಮಹಾಶ್ವೇತೆಯ ಮೇಲೆ ಬಿತ್ತು. ಚಿತ್ರರಥನು ಮೊರೆಯಿಟ್ಟ. ಆದ್ದರಿಂದ ತಾನೇ ಹೋದಳು. ಚಂದ್ರಾಪೀಡನಿಂದ ಬುದ್ಧಿಹೇಳಿಸಿ ನೋಡಬೇಕೆಂದು ಒಂದು ಚಪಲ. ಇವನನ್ನು ಕಂಡು ಆಕೆಯ ತೀರ್ಮಾನ ತಿರುಗೀತೊ ಎಂಬ ಆಸೆ ಒಳಗೆ. ಅವರು ಸೋತಿರಲು ತನ್ನ ನಿಯೋಗ ಹಣ್ಣಾಯಿತೆಂದು ತೃಪ್ತಿ. ತಂಗಿಯ ಸುಖವನ್ನು ಹೇಗೆ ಅಕ್ಕನು ಸಾಧಿಸಬೇಕೊ ಹಾಗೆ ಸಾಧಿಸಲು ಪ್ರಯತ್ನಿಸುವಳು. ಅದಕ್ಕೆ ಅಡ್ಡಿ, ಆತಂಕ ಬಂದರೆ ಪರಿತಪಿಸುವಳು. ತನಗೆ ದುಃಖವಿರುವಾಗ ಈಗೊಡವೆ ತನಗೇಕೆಂದು ಹಿಂಜರಿವ ಸ್ವಾರ್ಥವಲ್ಲ ಆಕೆಯದು.

ತನ್ನ ಕಥೆಯನ್ನು ಕೇಳಲು ಕುತೂಹಲ ತೋರಿದ ಚಂದ್ರಾಪೀಡನ ಸೌಜನ್ಯವನ್ನು ಕಂಡು ಹೇಗೆ ಪಕ್ಷಪಾತವುಂಟಾಯಿತೆಂಬುದರಿಂದಲೂ ಋಷಿಕುಮಾರರೊಡನೆ ಹೇಗೆ ನಡೆದುಕೊಂಡಳೆಂಬುದರಿಂದಲೂ ಆಕೆಯ ಮನಸ್ಸಿನ ಸರಳತೆಯೂ ಧಾರಾಳವೂ ಗೊತ್ತಾಗುತ್ತವೆ. ಕಥೆಯನ್ನು ಸಂಕೋಚವಿಲ್ಲದೆ

---

[1] ಸೂಕ್ತವಾಗಿ, ಉಚಿತವಾಗಿ ಬರುವ ಈ ಕಾವ್ಯದ ಪೃಥ್ವಿಗಳೂ ಬಹು ಸೊಗಸಾದವು.

ಹೇಳುತ್ತಾಳೆ. ಕಾದಂಬರಿಗೆ ಆತನ ಪರಿಚಯಮಾಡಿಕೊಡು ವುದರಲ್ಲಿ ಕೂಡ ಈ ಸಹಜ ಸರಳತೆ ಕಾಣುತ್ತದೆ. ಎದೆ ತುಂಬ ಪ್ರೀತಿ, ನಡೆತುಂಬ ಗಾಂಭೀರ್ಯ, ಸ್ನೇಹ. ಎಲ್ಲಿ ಹೋದರೂ ಆಕೆಗೆ ಗೌರವವೇ. ಎಲ್ಲರೂ ಆಕೆಯ ಕಣ್ಣಸನ್ನೆಗೆ ಕಾದು ನಡೆವವರೇ. ಕಾದಂಬರಿಗೆ ಪರಿಚಯಮಾಡಿಕೊಟ್ಟಂತೆಯೇ ಬೀಳ್ಕೊಳ್ಳಲು ಒಪ್ಪಿಗೆ ಕೊಡಿಸುವವಳೂ ಅವಳೇ. ಪುನಃ ಕರಸಿ ತೋರಿಸಿ ಸ್ಥಿತಿ ಕಾಣಿಸಿದಮೇಲೂ ಆತನು ಉಜ್ಜಯಿನಿಗೆ ಹಿಂದಿರುಗಿದನೆಂದು ಕೇಳಿದಾಗ ವಿಷಾದಪಟ್ಟು 'ಇಂತುಟೆ ವಲಂ!' ಎಂದು ವ್ಯಥೆಪಡುವವಳೂ ಆಕೆಯೇ.

ಇಂತಹ ಚಾರಿತ್ರ ಸುತ್ತಲ ಪರಿವಾರಕ್ಕೆ ಹಬ್ಬುವುದರಲ್ಲಿ ಆಶ್ಚರ್ಯವೇನು ? ಅವರು ಇಂಗಿತಜ್ಞರು, ಅನುಕಂಪೆಯವರು, ಸಜ್ಜನರು, ಜಾಣ್ನುಡಿಯವರು. ತರಳಿಕೆ, ಕೊಡೆಯವಳು ಎಲ್ಲರೂ ಹೀಗೆಯೆ. ಎಳವೆಯೊಳೇ ಗಾಂಭೀರ್ಯವನ್ನೊಳಕೊಂಡು ನಯಸಂಪನ್ನರಾದ, ಉಪಕಾರಕ್ಕೆ ಆತುರರಾದ ಜನ.

ಮಹಾಶ್ವೇತೆಯನ್ನು ಕಂಡರೆ ಚಂದ್ರಾಪೀಡನಿಗೆ ಉಂಟಾದಂತೆ ನಮಗೂ ಗುರುತ್ವ, ಪೂಜ್ಯಭಾವ ಉಂಟಾಗುವುದು. ಸಾವಿತ್ರಿ, ಸೀತೆ, ಬಿಯಾಟ್ರಿಚ್, ದಿ ಬ್ಲೆಸ್ಸೆಡ್ ಡ್ಯಾಮೊಸೆಲ್ ಮುಂತಾದ ಸಾಧ್ವಿಯರ ಸಾಲಿನ ಪ್ರೇಮಮೂರ್ತಿ, ಮಹಾಸತಿ ಆಕೆ.

**ಕಾದಂಬರಿ :** ಗಂಧರ್ವ ರಾಜಪುತ್ರಿಯಾಗಿ ಎಲ್ಲ ಭೋಗಕ್ಕೆ ಒಡತಿಯಾಗಿದ್ದರೂ ಅಕ್ಕ ಮಹಾಶ್ವೇತೆಯ ವಿರಕ್ತಿಯನ್ನು ಕೇಳಿ ತಾನೂ ಕನ್ಯಾವ್ರತದಲ್ಲಿ ಕಾಲಕಳೆಯುವೆನೆಂದು ತೀರ್ಮಾನಿಸುವುದು ಸಾಮಾನ್ಯವಲ್ಲ. ತಿಳಿವಳಿಕೆ, ನಯ, ನಾಜೂಕುಗಳಲ್ಲಿಯಾಗಲಿ ಗಾಂಭೀರ್ಯದಲ್ಲಿಯಾಗಲಿ ಕೋಮ

ಲತೆಯಲ್ಲಾಗಲಿ ಆಕೆಯ ಯೋಗ್ಯತೆ ಹಿರಿದು. ಪ್ರೇಮಕ್ಕೆ ಹೃದಯ ತೆರೆದಕೂಡಲೆ ಬಲಿದಾನಮಾಡಿಕೊಳ್ಳುವ ಭಕ್ತಿ ಆಕೆಯದು. ಕಾದಂಬರಿ ಮಹಾಶ್ವೇತೆಯರು ರೂಪು ಕಂಡೊಡನೆ ತಮ್ಮನ್ನು ತೆತ್ತುಕೊಂಡರಾದರೂ ಇವರ ಪ್ರೇಮಗಳನ್ನು ಕವಿ ಎರಡು ಬಗೆಯ ಬಣ್ಣ ಬೆಳಕು ಕುಂಚಗಳಿಂದ ಚಿತ್ರಿಸುತ್ತಾನೆ. ಪ್ರೇಮಕ್ಕಾಗಿ ಒಬ್ಬರೂ ನಿಜವಾಗಿ ಲಜ್ಜಿತರಲ್ಲದಿದ್ದರೂ ಮಹಾಶ್ವೇತೆಗಿಲ್ಲದಿದ್ದ ಒಂದು ಒಳಕೋಟಲೆಯ ಸನ್ನಿವೇಶ ಕಾದಂಬರಿಗೆ ಬಂತು. ಡಂಗುರ ಹೊಯ್ದಂತೆ ಲೋಕಕ್ಕೆ ತಿಳಿದಿತ್ತು ಆಕೆಯ ಪ್ರತಿಜ್ಞೆ. ಆದರೆ ಚಂದ್ರಾಪೀಡನು ಕಾಣಿಸಿದ ಕೂಡಲೆ ಸೋತುಬಂದಿಯಾದಳು. ಅದಕ್ಕಾಗಿ ಆಕೆಗೆ ನಾಚಿಕೆ.

ಪ್ರೇಮದ ಎದುರು ಆಕೆ ಮುಗ್ಧೆ. ಲೋಕಾನುಭವವಿಲ್ಲದವಳು. ಇಲ್ಲಿ ಕಟ್ಟುವ ಶೃಂಗಾರ ಲೌಕಿಕ ಸೊಗಸಿನದು, ಲಲಿತಕಲಾವಿಲಾಸವುಳ್ಳದ್ದು. ಇಬ್ಬರ ಬದುಕಿನಲ್ಲಿಯೂ ವಿರಹ, ಕರುಣೆ ಪ್ರಬಲಿಸಿದರೂ ಕಾದಂಬರಿಯದು ಹೆಚ್ಚು ಮೃದುಲವಾದ, ಸಪುರವಾದ, ಕ್ಲೇಶತಾಳಲಾರದ ದೇಹವೃತ್ತಿ; ಚಿತ್ತವೃತ್ತಿ. ಮಹಾಶ್ವೇತೆ ತಾಪಸಕುಮಾರರಿಗೆ ನಮಸ್ಕರಿಸಿ ಎದುರು ನಿಂತು ವೃತ್ತಾಂತ ಕೇಳಬಲ್ಲಳು. ದಿಟ್ಟಳಾಗಿ ಅವರನ್ನು ಮಾತನಾಡಿಸಿದಳು. ಕಿವಿಯೊಡವೆ ಯಾವ ಹೂಗೊಂಚಲಿಂದಾದುದೆಂದು ಕೇಳಿ ಅಭಿಲಾಷೆಯ ಹಾವಹಾಯಿಸಿದಳು. ಕಾದಂಬರಿಗೆ ಅಂತಹ ಮುಂದಾಳ್ತನ, ನುಗ್ಗು ಇಲ್ಲ. ಚಂದ್ರಾಪೀಡನಿಗೆ ಸ್ವಾಗತ ಕೊಡುವಾಗಲೂ ತಾಂಬೂಲ ದಾನ ಮಾಡುವಾಗಲೂ ಬೀಡಾರ ವ್ಯವಸ್ಥೆ ಮಾಡಬೇಕಾದಾಗಲೂ ಮಹಾಶ್ವೇತೆ ಒತ್ತಿ ನುಡಿಸಬೇಕು. ಕೆಲಸಮಾಡಿಸಬೇಕು. ಕುಮಾರನು ಕುಳಿತಿದ್ದ ಕಲ್ಲಹಾಸರೆಗೆ ಬಂದು ಒಂದು ಸಲ

ಮಾತನಾಡಿಸಿ ಹೋಗುವವಳಾದರೂ ಅದು ಅತಿಥಿಗೆ ತೋರುವ ಮರ್ಯಾದೆ. ಅವನ ಲೋಕ, ಊರು, ಮನೆ, ತಂದೆ, ತಾಯಿ, ಬಂಧುವರ್ಗದ ಕ್ಷೇಮವಿಚಾರಣೆಗಾಗಿ. ಇಷ್ಟೇ ಹೊರತು ತನ್ನ ಎದೆಯಾಸೆ ತೋರಲು ಇತರರ ನೆರವು ಬೇಕು. ಮಹಾಶ್ವೇತೆಯೊ ಮದಲೇಖೆಯೊ ಕೇಯೂರಕನೊ ಪತ್ರಲೇಖೆಯೊ ವಿಶದಪಡಿಸ ಬೇಕಾದ್ದು. ಇಲ್ಲವೇ, ಚಂದ್ರಾಪೀಡನೇ ಸಂದೇಹವನ್ನು ಬಗಿದು ಅನುಮಾನಿಸಿ ತಿಳಿಯಬೇಕಾದ್ದು. ಮಹಾಶ್ವೇತೆ ನೇರ ಅಭಿಸಾರಿಕೆಯಾಗಿ ಹೋದರೆ ಈಕೆ ದೀನಳಾಗಿ ಪತ್ರಲೇಖೆಗೆ ತನ್ನ ಕೊರಗನ್ನೂ ಭಂಗವನ್ನೂ ಏಕಾಂತದಲ್ಲಿ ತೋಡಿಕೊಳ್ಳ ಬೇಕಾಗುತ್ತದೆ. ಈಕೆಯ ಪ್ರಣಯದ ಬೆಳವಣಿಗೆಯನ್ನು ಕವಿ ಮೆಟ್ಟಿಲುಮೆಟ್ಟಿಲಾಗಿ ತೋರಿಸುತ್ತಾನೆ. ತಕ್ಕ ಆವರಣ ಕಟ್ಟು ತ್ತಾನೆ: ಶಾಲೀನತೆ, ಮೈಬೆಮರು, ಮಂದಹಾಸ, ಕಡೆಗಣ್ ನೋಟ, ತಳಿರ ಹಸೆ, ಹೂ, ಬೀಸಣಿಗೆ, ಮಲಯಜ, ಹಿಮಗೃಹ, ಸಂಗೀತಾದಿ ಕುಶಲಕಲೆಗಳ ಪ್ರಪಂಚದಲ್ಲಿ ಕೆಳದಿಯರು ಬಂದುಹೋಗುವುದು—ಇಂತಹ ಪ್ರಪಂಚದಲ್ಲಿ ಇಲ್ಲಿನ ಶೃಂಗಾರ ಭಾವದ ನಿವೇದನೆ ಆಗುವುದು. ಮಹಾಶ್ವೇತೆಯ ಪ್ರೇಮ ವರ್ಣನೆಯ ಪ್ರಪಂಚಕ್ಕೆ ಇದು ವಿದೃಶ ಪೂರಕ.

ಆಕೆಯ ಮನಸ್ಸು ಇತರರ ಗುಣವನ್ನು ಒಪ್ಪಿಕೊಳ್ಳುವಂಥದು. ತನಗಿಂತ ಮೇಲೆಂದು ಕಂಡ ಪತ್ರಲೇಖೆಯ ಚೆಲುವಿಗೆ ಆಕೆ ಸಂತೋಷಿಸಬಲ್ಲಳು. ಹೆಣ್ಣು ಇನ್ನೊಂದು ಹೆಣ್ಣನ್ನು ಹೀಗೆ ಒಪ್ಪುವುದು ಕಷ್ಟ. ಮಹಾಶ್ವೇತೆ ತನಗಿಂತ ಎಷ್ಟು ಹಿರಿಯಳೆಂಬ ತಿಳಿವಳಿಕೆ ಇರುವುದರಿಂದ ಆಕೆ ನಡಸಿದಂತೆ ನಡೆಯಲು ಒಪ್ಪು ತ್ತಾಳೆ. ಚಂದ್ರಲೋಕದಿಂದ ಗಂಡನಿಗಾಗಿ ರೋಹಿಣಿದೇವಿ ಇಳಿದು ಬಂದು ಹೇಗೆ ಪತಿಸೇವೆ ಮಾಡುತ್ತಿದ್ದಳೆಂದು ಕೇಳಿ ಆ

ಸಾಧ್ವಿಯ ಹಿರಿಮೆ ಋಜುವೃತ್ತಿಗಳಿಗೆ ತಲೆಬಾಗಿ ಒಂದು ಮಾತನ್ನೂ ಆಡಲರಿಯದೆ ಮೌನದ ಕಾಣಿಕೆ ಕೊಡುತ್ತಾಳೆ.

ಎಲ್ಲರಿಗೂ ಪ್ರಿಯಳು. ಅತ್ತೆಮಾವಂದಿರಿಗೆ ಒಂದು ಕ್ಷಣದಲ್ಲಿ ವಿಶ್ವಾಸವುಂಟುಮಾಡಿದಳು. ಹೆಣ್ಣುಜೀವದಲ್ಲಿ ಯಾವ ಮೆಲ್ಪು, ಸವಿ, ನಯ, ನವುರು, ಲಾಲಿತ್ಯ, ಭಕ್ತಿ ಕಾಣಬಹುದು ಅವುಗಳ ಕೆನೆ ಕಡೆದು ಊಡಿದಂತಿದೆ ಆಕೆಯ ಮಾತು, ಮನಸ್ಸು, ನಡೆಗಳಲ್ಲಿ. ಆದರೂ ಮಹಾಶ್ವೇತೆ ಕಾದಂಬರಿಯರನ್ನು ಹೋಲಿಸಿ ತಾರತಮ್ಯ ಹೇಳಬೇಕಾಗುವಾಗ ಕಾದಂಬರಿಯಂತಹ ಮಾನಿನಿಗೆ ಎಲ್ಲಿ ಅಪಚಾರವಾದೀತೊ ಎಂಬ ಭಯ ಉಂಟಾಗುವುದು. ಒಂದು ಹಣ್ಣು, ಇನ್ನೊಂದು ಹುವ್ವು; ಒಂದು ಶಿಲ್ಪ, ಇನ್ನೊಂದು ಚಿತ್ರ; ಒಂದು ಸೂರ್ಯ, ಇನ್ನೊಂದು ಚಂದ್ರ; ಒಂದು ತಪಸ್ಸು, ಇನ್ನೊಂದು ಮೃದುಲತೆ. ಎರಡು ಬಗೆಯ ಸುಂದರತೆಗೂ ಮನಸ್ಸು ಒಲಿಯುವುದು. ಇಬ್ಬರವೂ ಹಿರಿಜೀವಗಳು ಎಂದೇ ಬಾಣಕವಿ ಹೆಣ್ಣ ಹಿರಿತನದ ಈ ಎರಡು ಚಿತ್ರಗಳನ್ನು ಬಣ್ಣಿಸುವುದು. ಎರಡರ ಒಲವೂ ಮೋಹಕವೇ. ತಮ್ಮ ಭಕ್ತಿಯಿಂದ ಇನಿಯರನ್ನು ಬದುಕಿಸಿಕೊಂಡವು. ಆಕೆ ತಪಸ್ಸಿನಿಂದ ಜೀವವೆರೆದವರೆ ಈಕೆ ಅರ್ಚಿಸುತ್ತ ಸೋಂಕಿನೊಳಗಿದ್ದು ತನ್ನ ಪ್ರೇಮದ ಉಸಿರೂಡಿ ಇನಿಯನಿಗೆ ಜೀವ ತುಂಬಿ ಬದುಕಿಸಿಕೊಂಡವಳು.

**ಪುಂಡರೀಕ:** ಪುಂಡರೀಕನ ಹುಟ್ಟುಸಾವು ಸಂಸ್ಕಾರಗಳ ಕಥೆಯೇ ಕಾದಂಬರಿಯ ನೆಲಗಟ್ಟು. ಹುಟ್ಟಿದಂದು ತೊಟ್ಟು ಕಡೆಯವರೆಗೂ ಆತನ ಬಾಳನ್ನು ಒಂದು ವಿಧಿ ನಡಸಿತೆನ್ನಬಹುದು. ಆ ವಿಧಿ ನಾಲ್ಕೈದು ಇತರ ಜೀವಗಳನ್ನು ಸೆಳೆದುಕೊಂಡು ಪಾರುಪತ್ಯಮಾಡಿತು.

ಸ್ವರ್ಗದ ಮಹಾಮುನಿ ಶ್ವೇತಕೇತು; ಅತಿ ಚೆಲುವ. ಒಂದು ದಿನ ಸರೋವರದಲ್ಲಿ ಸ್ನಾನಕ್ಕಿಳಿದಿರಲು ಅಲ್ಲಿ ವಾಸವಾಗಿದ್ದ ಅಪ್ಸರೆ ಲಕ್ಷ್ಮಿ ಆತನಲ್ಲಿ ಮೋಹಗೊಳ್ಳಲು ಅವರಿಗೆ ಮಗನಾಗಿ ಪುಂಡರೀಕನು ಹುಟ್ಟುವನು. ಶಿಶುತನ ಕಳೆಯಲು ತಂದೆ ಇವನನ್ನು ವಿದ್ಯಾಪಾರಂಗತನಾಗಿ ಮಾಡಿ ಯತಿತ್ವ ಕೈಕೊಳಿಸಿದನು. ಆದರೂ ತಾಯ ಕಾರಣದಿಂದಲೇನೊ ಕಾಮಾತುರನಾಗಿ ಅಲ್ಪಾಯುವಾಗಿ ಹುಟ್ಟಿದ ಇವನಿಗೆ ಕೂಡಲೆ ತಂದೆ ಆಯುಷ್ಕರ ಹೋಮಮಾಡಿದ್ದಿದ್ದರೆ ಹೊತ್ತ ಪೀಡೆ ಕಳೆಯುತ್ತಿತ್ತು. ತಡವಾದ್ದರಿಂದ ಮದನಜ್ವರ ಸಂತಾಪಮರಣಕ್ಕೆ ಹುಡುಗನು ಸುಲಭವಾಗಿ ಈಡಾದನು. ಹೀಗೆ, ಕರ್ಮಕ್ಕೆ ಮಗುವಾಗಿ ಹುಟ್ಟಿ ಶಾಸ್ತ್ರಜ್ಞಾನ, ಮತಿ, ನೇಮ ಎಷ್ಟಿದ್ದರೂ ಸಾಲದೆ ಬೆಂಕಿಗೆ ಬೆಣ್ಣೆ ಕರಗುವಂತೆ ಕಾಮಕ್ಕೆ ಕರಗಿಹೋದನು.

ವಸಂತದಲ್ಲಿ, ಚತುರ್ದಶಿಯ ದಿನ ಶಿವದರ್ಶನಕ್ಕಾಗಿ ಹೊರಟ ಸಂದರ್ಭ ವಿಧಿವ್ಯಾಪಾರಕ್ಕೆ ಬಹು ಅನುಕೂಲ ಸನ್ನಿವೇಶ. ಅಂದು ನಡೆದ ಸಂಗತಿಗಳೆಲ್ಲ ವ್ರತವಿರುದ್ಧವೇ. ವನದೇವಿ ಬಂದು ಪಾರಿಜಾತವನ್ನು ಅವನಿಗೆ ಮುಡಿಸಬೇಕೇಕೆ? ಇವನು ಬೇಡಬೇಡವೆನ್ನುತ್ತಿದ್ದರೂ ಆಕೆಯ ಮೇಲಿನ ಕರುಣೆಯಿಂದ 'ಈಕೆಗೆ ಸಂತೋಷಂ ಮಾಡಿಂ' ಎಂದು ಕಪಿಂಜಲನು ಒತ್ತಾಯಪಡಿಸಬೇಕೇಕೆ? ದಾರಿಯಲ್ಲಿ ಮಹಾಶ್ವೇತೆ ಕಂಡು ತನ್ನಲ್ಲಿ ಏಕೆ ಮೋಹಗೊಳ್ಳಬೇಕು?[1] ಬುದ್ಧಿವಂತಳಾಗಿ ಮನೆಗೆ

---

1. ಶಾಕುಂತಲದಲ್ಲಿ ವಿಶ್ವಾಮಿತ್ರ ಮೇನಕೆಯರ ಮಗುವಾಗಿ ಹುಟ್ಟಿದ ಶಕುಂತಲೆ ಹೇಗೆ ಲೋಕಸೌಂದರ್ಯಕ್ಕೆ ಸೋತಿತೆಂಬುದನ್ನು ನೆನೆಯಬಹುದು. ಅಲ್ಲಿ ಕಣ್ವರು ಆಕೆಯ ಶಾಂತಿಕರ್ಮ.ವೆಸಗಲು ಸೋಮತೀರ್ಥಕ್ಕೆ ಹೋಗಿದ್ದರು.

ಹಿಂದಿರುಗದೆ ವಂದಿಸಿ ಹೋಗುವೆನೆಂದು ಆಕೆ ಏಕೆ ತೀರ್ಮಾನಿಸಬೇಕು? ಎಂದೂ ಇಲ್ಲದ ಕಾಮೋದ್ದೀಪನ ತನಗೆ ಆಗಿ ಮನಸ್ಸೇಕೆ ಚಲವಾಗಬೇಕು? ಹೆಣ್ಣು ಕುತೂಹಲದಿಂದ ಪಾರಿಜಾತದ ಸಂಗತಿ ಕೇಳಿದರೆ ಅದನ್ನು ದಾನಮಾಡಿದುದಲ್ಲದೆ ಆಕೆಗೆ ಮುಡಿಸಲು ತಾನೇಕೆ ಮುಂಬರಿಯಬೇಕು? ಒಡ್ಡಿತು ವಸಂತ ಶಕ್ತಿ. ಕೆರಳಿತು ವಿಧಿ. ಒಡೆಯಿತು ನಿಯಮ. ವಿಕಾರ ಆಸೆಯಾಯಿತು; ಆಸೆ ತಾಪವಾಯಿತು; ತಾಪ ಜ್ವರವಾಗಿ ಧುರ್ನಿವಾರವಾಯಿತು. ವೇದನೆಯನ್ನು ತಾಳಲು ಅಸಮರ್ಥನಾಗಿರಲು ಯಾವ ಬೋಧೆ ಬೇಡಿಕೆ ತೆಗಳಿಕೆಗಳೂ ತಡೆಯವಾದವು. ಇದರ ಮೇಲೆ ಚಂದ್ರಕಾಂತಿ ಬೇರೆ ವಿಜೃಂಭಿಸಿದೆ. ಪೃಥ್ವಿಯ ಆಳದಲ್ಲಿ ಇದ್ದುಕೊಂಡು ಮನುಷ್ಯರಕ್ತವನ್ನು ಕುದಿಸಿ ಅವಿವೇಕಕ್ಕೆ ಎಳೆಯಬಲ್ಲ ಪ್ರಕೃತಿಯ ಪ್ರಚಂಡ ಶಕ್ತಿಗಳು ಆತನನ್ನು ಮುರಿದುವು.

Gods and men, we are all deluded thus
It breaks in our bosom, and then we bleed.
(ದೇವರು ಮಾನವರು ನಾವೆಲ್ಲರೂ ಹೀಗೆ-ಭ್ರಾಂತರಾಗುತ್ತೇವೆ.
ಎದೆಯಲ್ಲಿ ಅದು ಒಡೆದು ಹೊಮ್ಮುವುದು; ನಾವು ನೆತ್ತರು ಕಾರುವೆವು.)

ಪುಂಡರೀಕನ ಕಥೆ ಬೇರೆ ಹುಟ್ಟಲ್ಲಿ ವೈಶಂಪಾಯನನಲ್ಲಿ ಮುಂದುವರಿಯುತ್ತದೆ. ಅಗಲಿ ಬದುಕಲಾರರೆಂಬಂತಿದ್ದ ಗೆಳೆಯರು ಅಗಲಿದುದೇ ಅನರ್ಥವಾಯಿತು. ಚಂದ್ರಾಪೀಡನು ತಂದೆಯ ಅಪ್ಪಣೆಯಂತೆ ಊರಿಗೆ ಮರಳಲು ಹಿಂದೆ ಕಾದಿದ್ದು ಪತ್ರಲೇಖೆಯನ್ನು ತರುವ ಕೆಲಸಕ್ಕಾಗಿ ಅಚ್ಛೋದದ ಬಳಿ ಅವನು ನಿಲ್ಲಬೇಕಾದ್ದೂ ಆ ಬಳಿಯೇ ಮಹಾಶ್ವೇತೆಯ ಆಶ್ರಮವಿದ್ದದ್ದೂ ವಿಧಿಯ ಮಾಟವಲ್ಲದೆ ಬೇರೇನು?

ಹಿಂದೆ ಯಾವಾಸೆ ಉಂಟಾಗಿ ಮೋಹ ಬಲಿಸಿತೊ ಧೈರ್ಯ, ಅರಿವು, ಉಪಶಾಂತಿಗಳನ್ನು ಜಳ್ಳುಮಾಡಿತೊ ಅದೇ ಪ್ರಬಲ ಶಕ್ತಿ ಈಗಲೂ ಕೆಲಸಮಾಡಿತು. ದೇವರ್ಷಿಯಾಗಿ ತಡೆಯ ಲಾಗದ ಕಾಮ ಮನುಷ್ಯನಿಗೆ ಯೋಗ್ಗೆ ? ಆಗುತ್ತದೆಯೆ ? ಆದ್ದ ರಿಂದಲೇ ಕೃತಜ್ಞತೆ ಕೆಡಿಸಿಕೊಂಡು, ಗೆಳೆಯನನ್ನು ಬಿಟ್ಟು, 'ಅಳೀಕಕಾಮಿ' ಯಾಗಿ 'ತನ್ನಿಂ ತಾನೆ' ಕೆಟ್ಟದ್ದು ; ಎರಡು ಶಾಪಗಳನ್ನು ಹೊತ್ತದ್ದು. ಬೇರೆ ರೀತಿ ಆಗುವುದು ಶಕ್ಯವೂ ಇರಲಿಲ್ಲ. ಹಿಂದೆ ಆತನನ್ನು ಮುರಿದಿದ್ದ ಎಲ್ಲವೂ ಅಂತೇ ಇವೆ. ಯಾವ ಆತುರ ಬಳಲಿಸಿ ಕೊಂದಿತೊ ಅದನ್ನು ನಿವಾರಿ ಸುವ ಶಕ್ತಿ ಈಗಿಗೂ ಬಂದಿಲ್ಲ. ಪೂರ್ವಜನ್ಮದ ಸಂಗತಿಗಳೆಲ್ಲ ರಕ್ತದ ಕರೆಯಾಗಿ ಒತ್ತಡವಾಗಿ ಸೆಳೆತಗಳಾಗಿ ಇವೆ. ಅದೇ ಸರೋವರ, ಅವಳೇ ಮಹಾಶ್ವೇತೆ, ಅದೇ ಕುಂದದ ಚೆಲುವು, ನಂದದ ಒಲವು, ಕಂದದ ಯೌವನ ; ಅವೇ ವಸಂತ, ಮಲಯಾನಿಲ, ಚಂದ್ರತಾಪ. ಅವನ ಪ್ರೇಮ ನಿಜವೂ ತುಂಬಿ ದುದೂ ಆದರೂ ಸಂಯಮವಿಲ್ಲದ್ದು ; ದೌರ್ಬಲ್ಯದಿಂದ ಹುಟ್ಟಿದ್ದು ; ವಿವೇಕಶೂನ್ಯವಾದ್ದು ; ಸ್ಥಾನ ಅಸ್ಥಾನ ಎಂಬುದರಿಯದೆ ಗಿಳಿಯಂತೆ ಗಳಹುವ ಅವನ ಸ್ಥಿತಿ

"... though strong in Love ... all too weak in Reason, in Self-Government too slow."

ಆದ್ದರಿಂದಲೇ ಶಾಪ ಕೇಳಿದಕೂಡಲೇ 'ಕೆಡೆದು ಪೊಂದಿದನ್ ಆಯಿಳೆಯಲ್ಲಚೇತನಂ' (ಹೋಲಿಸಿ : A lifeless corpse he lay). ಮದನಜ್ವರವೇಗವೆನ್ನಿ, ದುರ್ವಹ ಕರ್ಮಪರಿಪಾಕ ವೆನ್ನಿ, ಮಹಾಶ್ವೇತೆಯ ವಾಙ್ಮಹಿಮೆಯೆನ್ನಿ, ತಂದೆಯಿಟ್ಟ ಶಾಪವೆನ್ನಿ—ಎಲ್ಲವೂ ಕೂಡಿದವು. ವೈಶಂಪಾಯನನ ಕಥೆ ಮುಗಿಯಿತು.

ಅಲ್ಲಿಗೂ ಆ ಜೀವದ ಕರ್ಮ ತಿರುಗಲಿಲ್ಲ, ಸಂಸ್ಕಾರ ಹದಗೊಳ್ಳಲಿಲ್ಲ. ಎಲ್ಲಕ್ಕೂ ಮೀರಿ ಎರಡು ಹುಟ್ಟು ಕಳೆಯಲೇ ಬೇಕಾದ ಚಂದ್ರಶಾಪ ಇನ್ನೂ ಬಿಟ್ಟಿಲ್ಲ. ಗಿಳಿಯಾಗಿ ಹುಟ್ಟಿದನು.

ಮೊದಲು ಇಲ್ಲದಿದ್ದ ಒಂದು ಪರಿಣಾಮ ರಮಣೀಯವಾದ ಅನುಕೂಲ ಗಿಳಿಹುಟ್ಟಿನಲ್ಲಿ ದೊರೆಯಿತು. ಅದು ಪುಣ್ಯವೆನ್ನ ಬೇಕು. ಬಹುಶಃ ಕರ್ಮ ಸವೆವ ಕಾಲ ಹತ್ತಿರವಾದ ಲಕ್ಷಣ ಅದು. ಹುಟ್ಟುತ್ತಲೇ ಗಿಳಿ ತಾಯನ್ನು ತಿಂದುಕೊಂಡಿತು; ತಂದೆಯ 'ಅಭಿಮತಜಾಯಾವಿಯೋಗದ' ಅಳಲನ್ನು ಕಂಡಿತು; ಎದೆ ಕರಗುವ ಸಂದರ್ಭದಲ್ಲಿ ತಂದೆ ತೀರಿಕೊಳ್ಳಲು ತಬ್ಬಲಿಯಾಯಿತು. ತನ್ನ ಗತಿಯನ್ನೂ ಸ್ವಾರ್ಥವನ್ನೂ ಕಂಡು ಬೇಸರಪಟ್ಟು, ನಾಚುವ ಮನೋಧರ್ಮ ಉಂಟಾಯಿತು. ಜಾಬಾಲಿಗಳ ಕಥೆ ಕೇಳುತ್ತ ತನ್ನ ಕಾಮುಪರತೆ ಅರಿತು ನೆಲದಲ್ಲಿ ತಲೆ ಕುಕ್ಕುವಂತೆ, ಪಾತಾಳವನ್ನು ಹೊಗುವಂತೆ ಅದಕ್ಕೆ ಆಯಿತು. ಭಂಗದ ನೋವಿಂದ ಜೀವ ಕಳೆದುಕೊಳ್ಳಬೇಕೆಂದಿರುವಾಗ ಗೆಳೆಯ ಕಪಿಂಜಲನು ಬಂದು ಮುದ್ದುಮಾಡಿ ಧೈರ್ಯ ಹೇಳಿದ್ದರಿಂದ ಸ್ವಲ್ಪ ಉಪಶಾಂತಿ ಬಂತು. ಇಷ್ಟಾದರೂ ಜಾತಿಸ್ಮರತೆಯಿಂದ ವಿರಕ್ತಿ ಬಂತೇನು? ಚಂದ್ರಾಪೀಡನನ್ನು ಕಾಣಬೇಕೆಂಬ ತವಕ ಕಡಮೆಯಾಗಲಿಲ್ಲ. ಮಹಾಶ್ವೇತೆಯಲ್ಲಿ ಕೂರ್ಮೆ ನೂರ್ಮಡಿಯಾಯಿತೇ ಹೊರತು ಇಳಿಯಲಿಲ್ಲ. ತನಗಾಗಿ ಎಷ್ಟು ಜನ ಕಷ್ಟಪಟ್ಟರು, ಪಡುತ್ತಿದ್ದಾರೆ ಎಂಬುದರಿತು ಅತೀವ ಪಶ್ಚಾತ್ತಾಪವಾದರೂ ಯಜ್ಞ ಮುಗಿಯುವವರೆಗೂ ತಡೆದಿರಬೇಕೆಂಬ ತಂಪೆ ತಾಯಿ ಗೆಳೆಯರ ಮಾತನ್ನು ಮೀರಿ, ಜಾಬಾಲಿ ಹಾರೀತರ ಉಪಕಾರ ಸ್ಮರಿಸದೆ ವಲ್ಲಭಜನ ನಿರೀಕ್ಷಣ

ಉತ್ಸುಕತೆಯಿಂದ ಹಾರಿಯೇ ಹೋಯಿತು. ಕೆಳೆಯೇನು, ಹಿತವೇನು, ಕೃತಜ್ಞತೆಯೇನು? ಮಾಂಸ ವಸಾದಿ ವಿಕಾರದ ಎದುರು ಗತಿ ಮತಿ, ಬೋಧೆ ಗೀಧೆ ಎಲ್ಲ ಬೀಳೇ.

ತಾನು ಗಳಿಸಿಕೊಳ್ಳಲಾರದ ಸದ್ಗತಿಯನ್ನು ಹಿತವರಾದರೂ ಸಾಧಿಸಬೇಕಲ್ಲವೆ! ಯಜ್ಞ ಮುಗಿದ ಹೊರತು ಇದಕ್ಕೆ ಗಿಳಿ ಹುಟ್ಟು ಕಳೆಯದು, ದಿವ್ಯಜನ್ಮ ಬಾರದು ಎಂದು ತಿಳಿದ ತಾಯಿ ತಂದೆ ಮಗನನ್ನು ತಡೆದು ನಿರ್ಬಂಧಿಸಬೇಕಾಗುತ್ತದೆ. ಜೊತೆಗೆ ಈಗಲಾದರೂ ವಿರಕ್ತಿ ಹುಟ್ಟಿಸಬೇಕೆಂಬ ಬಗೆಯಿಂದ ತಾಯಿ ಮಗನನ್ನು ಹೊಲೆಯರ ಹೊಲಸು ಹಟ್ಟಿಗೆ ತರಿಸುವಳು. ರೋಮ ಹೊರೆದ ಹಸಿತೊವಲ ಪಂಜರದಲ್ಲಿಕ್ಕಿ, ಮಹಾ ಶ್ವೇತೆಯ ಅವಲೋಕನಕ್ಕೆ ಅಡ್ಡಿ ಮಾಡುವಂತೆ ಬಾಗಿಲುಮುಚ್ಚಿ ಅಗುಳಿಯನ್ನಿಕ್ಕಿ 'ನೀನ್ ಇಂತಿರು' ಎಂದು ಹೇಳಿ ಸಮಾಧಾನ ಗೊಳ್ಳುವಳು. ಯಾವಾಗ ಚಂಡಾಲರ ಸಂಗತಿಯಾಯಿತೊ ಆಗ ಗಿಳಿಯ ಶೋಕ ಮಿತಿಗೆ ಮುಟ್ಟಿತು. ನಿಖಿಲೇಂದ್ರಿಯ ನಿಗ್ರಹಕ್ಕೆ ಮನಸ್ಸು ಒಲಿಯಿತು. ಪ್ರಾಯೋಪವೇಶಮಾಡ ಬೇಕು ಎನ್ನಿಸಿತು.[1] ಕರ್ಮ ಹಣ್ಣಾಯಿತು ಎಂದೇ ಲೆಕ್ಕ.

---

ಇದು ಈ ಸಂಬಂಧದ ಪಿರಿಯಕ್ಕರ. :

1 ನುಡಿದೆನಪ್ಪೊಡೆ, ಲೇಸಾಗಿ ನುಡಿಯಲ್ಕೆ ಬಲ್ಲುದೀ ಗಿಳಿಯೆಂದು ಕನ್ನೆಯೆನ್ನಂ
ಬಿಡದಿರ್ಕುಂ ಆದರಿಂದಂ ಈ ಕನ್ನಿಕೆ ನುಡಿಯಿಸಿದೊಡಂ ಎಂತುಂ ನುಡಿಯದಿರ್ಪೆಂ
ನುಡಿಯದಿರ್ದೆನಪ್ಪೊಡೆ, ಕಡು ಮುಳಿಸಿಂದಂ ಪಿರಿದಪ್ಪ (ಅ)ವಸ್ಥೆಯ ನೆಯ್ದಿಸುಗುಂ
ನುಡಿಯುದದೆಂತುಂ ಏ ಬಾರ್ತೆಯೆಂದು ಮೇಣ್ ಬಿಡುಗುಮೊ ಪೇಳ್ ಎನುತೆ ಬಗೆಯುತಿರ್ದೆಂ

ಅದೇ ಹೊತ್ತಿಗೆ ಯಜ್ಞವೂ ಮುಗಿದಿತ್ತು. ಇನ್ನು ಭಯವಿಲ್ಲ ವೆಂದು ಅಪ್ಸರೆ ಲಕ್ಷ್ಮಿ ಚಂಡಾಲಕನ್ಯೆಯ ರೂಪದಲ್ಲಿ ಹೋಗಿ ಜನ್ಮಾಂತರದ ಗೆಳೆಯರನ್ನು ಸೇರಿಸಿದಳು. ನರದೇಹ ಬಿಟ್ಟು ದಿವ್ಯ ದೇಹ ಕೊಳ್ಳುವ ಸಮಯವಾಯಿತೆಂದಳು.

ಮೂರು ಹುಟ್ಟಲ್ಲಿ ಪುಂಡರೀಕನಿಗೆ ಕಾಮ ಅಳಿಯಲಿಲ್ಲ. ವಿವೇಕ, ಸಂಯಮ ಅವನ ಬದುಕನ್ನು ತಿದ್ದಲಿಲ್ಲ. ಯಾವ ಗತಿಗೆ ಬಿದ್ದರೂ ಯಾರಿಗಾಗಿ ಮೊದಲು ಹಂಬಲಿಸಿ ಸತ್ತನೋ ಆ ಹಂಬಲಿಕೆ ಆರಲಿಲ್ಲ, ತೀರಲಿಲ್ಲ. ಆ ಮಟ್ಟಿನ ಪಶ್ಚಾತ್ತಾಪ ವಾದರೂ ಬಂದದ್ದು ಸಾಕೆಂದು ವಿಧಿಯೇ ಉದಾರತೆ ತೋರಿಸಿ ತೇನೊ! ಶಾಪ ಮುಗಿಯಿತು. ತಂದೆಯ ಶಾಂತಿಕರ್ಮ ರಕ್ಷಿಸಿತು; ಮಹಾಶ್ವೇತೆಯ ಪುಣ್ಯ, ತಪಸ್ಸು ಫಲಿಸಿ ಅಮೃತ ವೂಡಿತು. ಪುಂಡರೀಕನ ಉದ್ಧಾರವಾಯಿತು.

**ಚಂದ್ರಾಪೀಡ:** ತಾನು ಚಂದ್ರನೆಂದು ಚಂದ್ರಾಪೀಡ ನರಿಯನು. ರಾಜಕುಮಾರನಾದ ಅವನು ಒಳ್ಳೆಯ ಮಗನಾಗಿ, ಒಡೆಯನಾಗಿ, ಗೆಳೆಯನಾಗಿ, ಬಾಳಿದುದು ಆತನ ವಿಶೇಷ. ಆತನ ವಿದ್ಯಾವಿನಯಗಾಂಭೀರ್ಯಗಳು ಎಲ್ಲರಿಗೂ ಮೆಚ್ಚಿಕೆ ಯಾದವು. ಸ್ವಭಾವತಃ ಸೌಮ್ಯನಾದ ಆತನಲ್ಲಿ ಶಿಕ್ಷಣದಿಂದ ಒಂದು ಸಂಯಮ ಗಳಿಕೆಯಾಗಿದೆ. ಶುಕನಾಸನ ಉಪ ದೇಶದಿಂದ ಮದಗಳ ಸ್ವರೂಪ ಗೊತ್ತಾಗಿದೆ. ಒಮ್ಮೆಗೇ ಮಹಾಶ್ವೇತೆಯಂಥವಳ ವಿಶ್ವಾಸವನ್ನೂ ಪಡೆದನು.

ಮಹಾಶ್ವೇತೆಯಲ್ಲಿ ಆತನಿಗೆ ಭಕ್ತಿ, ಗೌರವ ಇದ್ದುವು. ಆಕೆ ನಡಸಿದಂತೆ ನಡೆದುಕೊಂಡನು. ಕಾದಂಬರಿಯಲ್ಲಿ ಅನುರಾಗ ಉಂಟಾದಾಗ ಕೂಡ ಆತನ ನಡತೆ ನಿರ್ದುಷ್ಟವಾದ್ದು, ವಿವೇಕ ಪೂರ್ಣವಾದ್ದು. ಒಂದು ಹೆಜ್ಜೆ ಹಿಂದೆ ನಿಂತು ಕರ್ತವ್ಯವನ್ನು

ಪರೀಕ್ಷಿಸಿ ತಿಳಿದು ನಡೆಯುವ ಸ್ವಭಾವವೇ ಹೊರತು ದುಡುಕುವ ಸಾಹಸವಲ್ಲ ಅವನದು. ಇಂದ್ರಿಯದ ಡಾವರ ಪುಂಡರೀಕನನ್ನು ಯಾವ ಗತಿಗೆ ತಂದಿತೆಂಬುದನ್ನು ಕಂಡಿರುವ ನಮಗೆ ನಿಯಮುಸ್ಥನಾದ ಈತನ ಚಿತ್ರದಲ್ಲಿ ಯೌವನಾನುಶಾಸನ ಕಾಣುತ್ತದೆ. ಕಾದಂಬರಿಯಲ್ಲಿ ಕಂಡದ್ದು ಪ್ರೇಮದ ಚಿಹ್ನೆಗಳೇ ಎಂದು ಅರ್ಥವಾದರೂ ತನ್ನ ತಾಳ್ಮೆಯಲ್ಲಿ ತಾನಿರುತ್ತಾನೆ. ಕೌಮುದಿಯಿಂದ ಎಷ್ಟೇ ಕ್ಷೋಭೆಗೊಂಡರೂ ಕಡಲು ಹೇಗೆ ಮೇರೆಮೀರದೊ ಹಾಗೆ ಅವಸ್ಥಾಂತರ ಅಡಸಿದರೂ ಮರ್ಯಾದೆಯನ್ನು ದಾಟದಿರುವ ಗಾಂಭೀರ್ಯರತ್ನಾಕರ ಆತನು.[1] ಯೌವನವಿದೆ, ರೂಪಿದೆ, ಆಸೆ ನಂಬೆನ್ನುತ್ತಿದೆ. ಹೀಗಿದ್ದರೂ ಕೇವಲ ಅತಿಥಿ ಮರ್ಯಾದೆಯೊ ಸೌಜನ್ಯವೊ ಲೌಕಿಕ ಉಪಚಾರ ಮಾತ್ರವೊ ಆಗಿರಬಹುದಾದ್ದನ್ನು ಯೌವನದ ಉದ್ಯನ್ಮದದಲ್ಲಿ ಪ್ರೇಮವೆಂದು ಭ್ರಮಿಸಿದರೆ ಅವಿವೇಕವಾದೀತು ಎಂಬ ನಯದ ಭಯ ಅವನಲ್ಲಿ ಇದ್ದೇ ಇದೆ. ಪ್ರೇಮವೇ ನಿಜವಾದರೆ ತನ್ನಷ್ಟಕ್ಕೆ ವ್ಯಕ್ತವಾಗುವುದೆಂದು ತಡೆದನೇ ಹೊರತು ಧುಡುಂ ಪ್ರವೇಶಮಾಡಲಿಲ್ಲ. ಮುಂದೆಯೂ ಕರಸಿಕೊಂಡೇ ಕಾದಂಬರಿ

---

[1] ಉದಕ (ಅ)ಂತಃ ಪಾತಿವೊಲ್ ಸ್ನೇಹದ ಲವಂ ಎನಸುಂ
ಪರ್ವಿ ಮುದ್ಯೌವನೋದ್ಯನ್
ಮದದೊಳ್ ತೋರುತ್ತುಮಿರ್ದಪ್ಪುದು ಕನಸಿನ ವೋಲ್
ಎನ್ನ ತತ್ ಕಾಂಕ್ಷೆ ಕಯ್ ಸಾ
ರದುದಂ ತೋರುತ್ತುಂ ಇರ್ದತ್ತು ಎನಗೆ ಪಿರಿದುಂ ಈ ಚಿತ್ತದ
ಒಂದಾಸೆ ದಲ್ ಮಾ
ಯದ ಕುಂಜಂ ಬೋಲ್ ಅಸಂಭಾವ್ಯಮನೆ ದಿಟಂ ಎನಲ್
ತೋರುತಿರ್ದಪ್ಪುದೀಗಳ್

ಯಲ್ಲಿಗೆ ಹೋದಾನು. ಎರಡನೆಯ ಸಲ ಕಾದಂಬರಿಯ ಸ್ಥಿತಿಯ ವಿವರ ವಿವರದಲ್ಲಿಯೂ ಪ್ರೇಮಭಾವ, ತಾಪ, ಸ್ಪಷ್ಟವಾಗು ತ್ತಿತ್ತು–ಮನಸ್ಸಿಗೆ. ಆಕೆ ಆಡಲರಿಯಳು. ಕುಲೀನಳಾದ ಹೆಣ್ಣು ಆಡಬಾರದು. ಸಖಿಯರೂ ತುಟಿಮೀರಿ ನುಡಿಯುವುದು ನಡತೆಯಲ್ಲ. ಮದಲೇಖೆಯೇನೊ ತಕ್ಕಮಟ್ಟಿನ ಧ್ವನಿ ಕಾಣಿಸುತ್ತಾಳೆ :

ನೀರೇಜ, ತಾಳವೃಂತ, ಸ
ಮೀರಾದಿಗಳಿಂದ ತಾಪಂ ಒದವಿದಪುದು ನೋಡು ಈ
ತರುಣಿಗೆ; ಧೀರತ್ವದ
ನಾರತ ಸಂಗತಿ ಅದೊಂದೆ ಜೀವಾಧಾರಂ

–ಕಣ್ಣು ಕಾಣುತ್ತಿರುವುದನ್ನೂ ಎದೆ ಆಶಿಸುತ್ತಿರುವುದನ್ನೂ ನುಡಿ ಪೋಷಿಸುತ್ತಿದೆಯಾದರೂ ಶ್ಲೇಷೆಯಲ್ಲಿ ಧೀರ, ತ್ವತ್+ ಅನಾರತ ಸಂಗತಿ, ಆಗಬಹುದು; ಇಲ್ಲವೇ, ಧೀರತ್ವದ+ ಅನಾರತ ಸಂಗತಿ ಆಗಬಹುದು. ಹೇಗೊ, ಏನೊ! ಒಂದರ್ಥ ದಲ್ಲಿ

....ನೋವಿದು ನಿನ್ನಿಂ
ಪಿರಿದು ಎನ್ನದು, ಆದರಿನ್ ಎಂತುಂ
ಸರೋಜಮುಖಿ, ನಿನ್ನ ಸುಖಮುನ್ ಆನ್ ಬಯಸಿದಪೆಂ

ಎಂದಿದ್ದ ತನ್ನ ನುಡಿಗೆ ಉತ್ತರದಂತೆಯೇ ಇದೆ. ಇದ್ದರೂ ಸಂದೇಹಕ್ಕೆ ಅವಕಾಶವಿರುವಾಗ ತನ್ನ ಇಷ್ಟಕ್ಕೆ ವಿರೋಧವಾದ ಅರ್ಥಮಾಡಿ ಮರ್ಯಾದೆ ಕಾಪಾಡಿಕೊಂಡನೇ ಹೊರತು ಅನುಕೂಲಾರ್ಥದ ಪ್ರಯೋಜನವನ್ನು ಬಯಸಲಿಲ್ಲ.[1]

---

[1] ದುಷ್ಯಂತನ ನಡತೆ ಇದಕ್ಕೆ ವಿಪರೀತ : ಅಸಂಶಯಂ ಕ್ಷತ್ರ ಪರಿಗ್ರಹ ಕ್ಷಮಾ | ಯದಾರ್ಯಂ ಅಸ್ಯಾಂ ಅಭಿಲಾಷಿ ಮೇ ಮನಃ |

ಕೇಯೂರಕನು ವರ್ಣಿಸಿದ ಚರ್ಯೆಯೂ ಆಕೆಯೇ ಪತ್ರಲೇಖೆಯಲ್ಲಿ ನುಡಿದ–

ಪಿರಿಯರ್ಗೆ ಇದು ಗುಣಮೊ, ಪೇಳ್  
ಪರಿಚಯಕೆ ಇದು ಫಲವೊ, ತರುಣಿ, ಬಿಸತಂತುವಿನೊಳ್  
ಧೊರೆ ಎನಿಪ ಎಳಮನದ ಎನ್ನಂ  
ಪರಿಭವಿಪುದೆ ಕಂಡು ಕನ್ನೆಯುಂ, ಯುವರಾಜಂ ?

ಎಂಬ ದೂರೂ ತೀರ್ಮಾನ ತಂದುವು. ಇಂತಹ ದಡ್ಡನೂ ಉಂಟೇ ಎಂದು ಚತುರರಾದ ಶೃಂಗಾರಸಾರರು ತೆಗಳುವಷ್ಟು ನಿಗ್ರಹವೃತ್ತಿ ಆತನದು.

ಪತ್ರಲೇಖೆಯೊಡನೆ ಆತನು ಕಳಿಸಿದ ಸಂದೇಶದಲ್ಲಿ ನಯದ ಪರಿಮಳ ತುಂಬಿದೆ. ಈ ಬಗೆಯ ನಡತೆಯಲ್ಲಿ ಒಂದಖಂಡ ಜೀವನ ಸಂಸ್ಕೃತಿ ನುಡಿಯುತ್ತಿದೆ ಎನ್ನಬೇಕು. ಬಾಣ ಕಾಲದ ಸಮಾಜದಲ್ಲಿ, ಹರ್ಷನ ಸಭೆ ರಾಜಾಂತಃಪುರಗಳಲ್ಲಿ ಯಾವುದನ್ನು ನಾಗರಿಕರಾದ ಹಿರಿಯರು ಮೇಲುನಡತೆ ಎನ್ನುತ್ತಿದ್ದರೊ ಅದರ ಕೆನೆಯನ್ನು ಚಂದ್ರಾಪೀಡ, ಕಾದಂಬರಿ, ಮಹಾಶ್ವೇತೆಯರ ಪರಸ್ಪರ ನಡೆಯಲ್ಲಿ ಕವಿ ತೋರಿಸುತ್ತಿದ್ದಾನೆ ಎನ್ನಿಸುತ್ತದೆ. ಸಂಪೂರ್ಣ ಸ್ವಾತಂತ್ರ್ಯವಿರುವ ಆವರಣದಲ್ಲಿ,[1]

---

ಸತಾಂ ಹಿ ಸಂದೇಹಪದೇಷು ವಸ್ತುಷು । ಪ್ರಮಾಣಂ ಅಂತಃಕರಣ ಪ್ರವೃತ್ತಯಃ । ಆತನ ಆತ್ಮವಿಶ್ವಾಸಕ್ಕೆ ಹೇಗೊ ಅಲ್ಲಿ ಅದ್ದಬಲ್ಲ ಕೆಸರಿನ ಜಾರಿಕೆಗಳಿಗೂ ಅಳತೆಯಿಲ್ಲ.

1 ಆ ಲೋಕದಲ್ಲಿ ಗಂಡೇ ಇಲ್ಲವೇನೊ ಎಂಬಂತಹ ನಾರೀಮಂಡಲವಿದೆ. ಕಾದಂಬರಿಯನ್ನು ನೋಡಲು ಚಂದ್ರಾಪೀಡನು ಮೊದಲ ಬಾರಿ ಅಲ್ಲಿ ಹೋದಾಗ–ಆದರೆ ಆ ಸಂಸ್ಕೃತಿ, ವಿಲಾಸಗಳು ಅಚ್ಚರಿ ತರುವಂಥವು.

ವಯಸ್ಕರಾದ ಗಂಡು ಹೆಣ್ಣು ಸೇರಿ ಹೊರಗೆ, ಒಳಗೆ, ಏಕಾಂತದಲ್ಲಿ ಕೂಡ ಮರ್ಯಾದೆ ಸಂಯಮಗಳನ್ನು ಕಾಪಾಡಿಕೊಂಡು ಯಾರಿಗೂ ಅಪಕೀರ್ತಿ ಬಾರದಂತೆ ಹೇಗೆ ಬೆರೆಯಬಹುದೆಂಬುದಕ್ಕೆ ಈ ಮೂವರ ನಡತೆ ಉತ್ತಮ ನಿದರ್ಶನವಾಗುತ್ತದೆ. ಈತನ ಪ್ರೇಮ ಆಳವಾದ್ದಾದರೂ ಒಂದು ಶಾಖದ ಹದವನ್ನು ಕಾಪಾಡಿಕೊಂಡು ಬೆಳ್ಳಗೆ ಮಿರುಗುವ ಬೆಂಕಿಯ ಕೆಂಡದಂತಿದೆ. ಪುಂಡರೀಕನ ಪ್ರೇಮವೋ: ಕಾಮಜ್ವಾಲೆ ತಾಕಿ ಉರಿಗೆ ಸಿಕ್ಕಿ ರೆಕ್ಕೆ ಸುಟ್ಟು ಜೀವ ತೆರಬೇಕಾಗಿ ಬಂದ ಪತಂಗ ಅವನು.

ಗುರುಹಿರಿಯರಲ್ಲಿ ಚಂದ್ರಾಪೀಡನಿಗೆ ಭಕ್ತಿಯಿದೆ, ವಿಧೇಯತೆ ಇದೆ. ತನ್ನಿಚ್ಛೆಗೆ ವಿರೋಧವಾದರೂ ತಂದೆಯ ಅಪ್ಪಣೆ ತಲೆಯಲ್ಲಿ ಹೊರಬೇಕಾದ್ದು. ಕಾದಂಬರಿಯ ಬಳಿ ಸಾರುವ ತವಕ ತನಗೆಷ್ಟೇ ಇದ್ದರೂ ಲಜ್ಜೆಗೆಟ್ಟು ಆತನೇ ನೇರವಾಗಿ ತಾಯಿ ತಂದೆಗಳಿಗೆ ಹೇಳಲಾರದೆ ಗೆಳೆಯನಿಗೆ ಏನು ಕೇಡಡಸಿತೊ ತಕ್ಷಣ ಹೋದರೆ ಪ್ರಯೋಜನವಾದೀತು ಎಂಬ ಅವಸರದಲ್ಲಿಯೂ

> ಜನನಿಗೆ ಪೇಳದೆ ಆರ್ಯಶುಕನಾಸನನ್ ಈಕ್ಷಿಸದೆ, ಆತ್ಮನಂ
> ದನನ ವಿಯೋಗದಿಂ ಮರುಗುತಿರ್ದ ಮನೋರಮೆಯಲ್ಲಿಗೆ ಐದದೆ,
> ಆನ್
> ಅನುನಯದಿಂದಂ ಆದರಿಸದೆ, ಇತ್ತಣಿನಿತ್ತಲೆಪೋದಡೆ ಆನುಂ ಆ
> ತನ ತೆರನಪ್ಪೆನ್, ಇರ್ಮಡಿಸುಗುಂ ಗುರುಗಳ್ಗೆ ಅತಿದುಃಖಂ;
> ಏವೆನೋ!

ಅವರನ್ನು ಆಶ್ವಾಸಿಸಿಯೇ ಹೋಗತಕ್ಕದ್ದು ಎಂದು ನಿರ್ಣ

ಯಿಸುತ್ತಾನೆ.[1] ಹೀಗೆ ತನ್ನನ್ನು ನಿಯಾಮಿಸಿಕೊಳ್ಳುವುದೂ ಇನ್ನೊಬ್ಬರ ಮನಸ್ಸನ್ನು ಅರ್ಥಮಾಡಿಕೊಳ್ಳಲು ಆತುರನಾಗಿರುವುದೂ ಅವರಿಗೆ ಮನಃಕ್ಲೇಶವಾಗುವುದನ್ನು ಮಾಡದಿರುವುದೂ ನಿಜವಾದ ಸಂಸ್ಕಾರದ ಗುರುತು.

ತನ್ನ ಜೀವದ ಗೆಳೆಯನಲ್ಲಿ ಆತನಿಗೆ ಎಷ್ಟು ಆಳವಾದ ಸ್ನೇಹವಿತ್ತು ಎಂಬುದು ಅವನು ಬಾರದುದಕ್ಕೆ ಎಷ್ಟು ಕಳವಳ ಪಟ್ಟನೆಂಬುದರಿಂದಲೂ ಅವನಳಿದ ಸಂಗತಿ ತಿಳಿದಕೂಡಲೆ ಹೇಗೆ ಎದೆಯೊಡೆದು ಜೀವರಹಿತನಾಗಿ ಬಿದ್ದನೆಂಬುದರಿಂದಲೂ ತಿಳಿಯಬಹುದು.

ಶೂದ್ರಕನಾಗಿ ಹುಟ್ಟಿದಾಗಲೂ ಚಂದ್ರ–ಚಂದ್ರಾಪೀಡರ ಸೌಮ್ಯತೆ, ನಿಯಮನಿಷ್ಠೆ, ಗಾಂಭೀರ್ಯಗಳೇ ಆತನಲ್ಲಿ ಕಾಣುವುವು. ಕಾದಂಬರಿ ದೊರಕುವವರೆಗೂ ಬೇರೆ ಸ್ತ್ರೀಸಂಗ ಬೇಕಿಲ್ಲವೆಂಬಂತೆ ವಿರತಿಯಲ್ಲಿರುವನು. ಇಂಥವನಾದ್ದರಿಂದಲೇ ಪತ್ರಲೇಖೆಯಾಗಿ ಹುಟ್ಟಿ ಹೀನತೆಯನ್ನು ಲಕ್ಷಿಸದೆ ರೋಹಿಣಿ ಆತನಿಗೆ ಪರಿಚರ್ಯೆ ಮಾಡಿದುದು.

## ೩. ಒಂದೆರಡು ವಿಶೇಷ ಸಂಗತಿಗಳು

ಕಥೆ, ಒಂದೆರಡು ಸನ್ನಿವೇಶಗಳು, ಕೆಲವರ ಶೀಲಸ್ವರೂಪ ಮುಂತಾದವನ್ನು ಸ್ಥೂಲವಾಗಿ ತಿಳಿಸಲು ಮೇಲೆ ಯತ್ನಿಸಿದೆ. ಈ ಎಲ್ಲದರ ಅಡಿಯಲ್ಲಿ ಇರುತ್ತ ಎಲ್ಲವನ್ನೂ ಬೆಳಸಿ

---

1. ಈ ವಿವೇಚನೆ ಅತಿಯಾಗಿ ದುರ್ಬಲತೆಯಾಗುವುದನ್ನು ಕಿನ್ನರ ಪ್ರಸಂಗದಲ್ಲಿ ಕಾಣಬಹುದು. ಅಟ್ಟಿ ಅವು ಸಿಕ್ಕದಿರಲು ಆತನಿಗೆ ಬರುವ ವಿಷಾದ ಕ್ಷತ್ರಿಯ ತರುಣನದಲ್ಲ.

ನುಡಿಸುವ ಪ್ರಭಾವ ಪ್ರೇಮವೆಂದು ಈವರೆಗಾಗಲೇ ತಿಳಿದಿರಬೇಕು. ನಾಲ್ಕಾರು ಮಟ್ಟದ ಪ್ರೇಮವನ್ನು ಚಿತ್ರಿಸುವಾಗ ಅದಕ್ಕೆ ಬರುವ ಕಷ್ಟನಿಷ್ಠುರ, ಅದರ ಆಳ, ವಿಶ್ವಾಸ, ಭೀತಿ, ಪರೀಕ್ಷೆ, ತಿಳಿ, ಕದಡು, ಧೈರ್ಯ, ತಬ್ಬಲಿತನಗಳ ಲೋಕವೂ ಕಟ್ಟ ನಿಲ್ಲುತ್ತದೆ. ಜೊತೆಗೆ ಈ ಕಾವ್ಯದಲ್ಲಿ ಒಂದು ಲೌಕಿಕ ನಯ, ಮರ್ಯಾದೆಗಳ ಉಸಿರಬಿಸುಗೆ ಇದೆಯೆಂದೂ ತಿಳಿದಿರಬೇಕು. ಗಂಡು ಗಂಡಿಗೆ, ಹೆಣ್ಣು ಹೆಣ್ಣಿಗೆ, ಗಂಡು ಹೆಣ್ಣಿಗೆ, ತಂದೆ ಮಕ್ಕಳಿಗೆ, ಆಳು ಒಡೆಯರಿಗೆ ನಡುವೆ ಇರುವ ಸೌಜನ್ಯದ ಮೃದುಬಗೆ ಕಥಾಸೂತ್ರದಲ್ಲಿ ನಿಂತು ಕಾಣುತ್ತದೆ. ಕೇವಲ ರಕ್ತದ ಕರೆ ಅಥವಾ ಮೂಕ ಸೆಳೆತದಿಂದ ಹಿಡಿದು ಸ್ವರ್ಗದ ಆಸೆಯಿಲ್ಲದೆ ನರಕದ ಭೀತಿಯಿಲ್ಲದೆ ಜನ್ಮಜನ್ಮಾಂತರಗಳಲ್ಲಿ ಭಕ್ತಿ, ನೆಚ್ಚು, ತಪಸ್ಸುಗಳನ್ನು ತೊಟ್ಟು ವ್ರತಶೀಲವಾದ ಪ್ರೇಮದವರೆಗೂ ನೆಲಸು ಇರುತ್ತದೆ.

ಗಿಳಿಗಳ ದಾಂಪತ್ಯದ ಚಿತ್ರವಿದೆ. ಕಿನ್ನರ ಮಿಥುನದ ಇಚ್ಛಾವಿಹಾರವಿದೆ. ಅಡಗದ ಕಾಮವೃತ್ತಿಯಲ್ಲಿ ದುರ್ಗತಿಗೆ ಬಿದ್ದು ತೊಳಲುವ ರಾಗದ ಕಣ್ಕುರುಡು ಪುಂಡರೀಕನಲ್ಲಿ ಕಂಡರೆ ಒಂದು ನಿಯಮ, ನಯ, ಗಾಂಭೀರ್ಯದಲ್ಲಿ ಬೆಳೆಯುವ ವ್ಯವಹಾರ ಪ್ರಪಂಚದ ಉತ್ತಮಪ್ರೇಮದ ಬಗೆ ಕಾದಂಬರಿ ಚಂದ್ರಾಪೀಡರ ಸಂಬಂಧದಲ್ಲಿ ಕಾಣುತ್ತದೆ. ಶುಚಿಶೀಲಳಾಗಿ ದೃಢಳಾದ ಕುಲಾಂಗನೆ ಎಲ್ಲಿಯವರೆಗೂ ತನ್ನ ತೇಜಸ್ಸನ್ನು ಬಲಿಸಬಲ್ಲಳು, ತನಗೂ ತಾನೊಲಿದವರಿಗೂ ಮಂಗಳವನ್ನು ಹೇಗೆ ತರಬಲ್ಲಳು ಎಂಬುದು ಮಹಾಶ್ವೇತೆಯ ಸಮನಿಲ್ಲದ ಪ್ರೇಮದಲ್ಲಿ ನಿದರ್ಶನಕ್ಕೆ ಬರುತ್ತದೆ. ಗೆಳೆಯನು ವ್ರತಕೆಟ್ಟು ಕೇಡಿಗೊಳಗಾಗುವನು, ಹೀನನಾಗುವನು ; ಕೈಯಲ್ಲಾಗುವ

ಮಟ್ಟಿಗೂ ಅದನ್ನು ತಪ್ಪಿಸಬೇಕೆಂದು ಪ್ರಯತ್ನಪಟ್ಟು, ಪ್ರಯೋಜನವಾಗದಿರಲು ಗೊಡ್ಡುನಿಷ್ಠುರವನ್ನು ಒತ್ತಟ್ಟಿಗಿಟ್ಟು ಅವನ ಪ್ರಾಣವನ್ನು ಉಳಿಸುವುದು ತನ್ನ ಕರ್ತವ್ಯವೆಂದು ಕಪಿಂಜಲ ಬಗೆಯುವನು. ಆಶ್ರಮವಿರುದ್ಧವಾದ ಕಾರ್ಯದಲ್ಲಿ ತೊಡಗಕೂಡದೆಂದು ತಿಳಿದಿದ್ದರೂ ಪ್ರಣಯನಿಯೋಗ ತನ್ನಂಥ ವನಿಗೆ ತಕ್ಕದ್ದಲ್ಲವೆಂದು ಅರಿತಿದ್ದರೂ ಆ ಅಪರಿಚಿತ ಪ್ರಪಂಚಕ್ಕೆ ಪ್ರವೇಶಿಸಿ ಗೆಳೆಯನನ್ನು ಉಳಿಸಬೇಕೆಂದು ಮಹಾಶ್ವೇತೆಯನ್ನು ಬೇಡುವ ಅವನ ಸ್ನೇಹವೃತ್ತಿಯೂ ಸಹಾಯಬುದ್ಧಿಯೂ ಉದಾತ್ತವಾದವು. ಗೆಳೆಯನ ಚಿಂತೆಯಲ್ಲಿರುವಾಗ ಶಾಪಹೊಂದಿ ವಾಹನವಾಗಿ ಕಷ್ಟಪಟ್ಟು ಯಾವ ಸ್ಥಿತಿಯಲ್ಲಿಯೇ ಆತನಿರಲಿ ನೋಡಿದ ಹೊರತು ಜೀವ ನಿಲ್ಲದೆಂಬಂತೆ ಆಸಕ್ತಿ ತಳೆದು ಗಿಳಿಯ ಬಳಿಗೆ ಹೋಗಿ ಮಾತನಾಡಿಸಿ,[1] ಸಮಾಧಾನ ಮಾಡಿ, ಆತನ ಗತಿ ಉತ್ತಮಗೊಳ್ಳಲು ಎಲ್ಲ ಬಗೆಯಲ್ಲಿಯೂ ನೆರವಾದ ಈತನ ಚಾರಿತ್ರ ಲೋಕೋತ್ತರವಾದ್ದು. ತಾನೇ ರಾಜನ ಮಗಳಾಗಿ ಹುಟ್ಟಿ, ಕುಲ, ಶೀಲ, ರೂಪ ಸಂಪನ್ನತೆಗಳಿಂದ ಯಾವ ಚಕ್ರವರ್ತಿಗೇ ಆಗಲಿ ಯೋಗ್ಯಳಾಗಬಲ್ಲ ಗುಣವುಳ್ಳವ ಳಾಗಿರುತ್ತ, ದುರದೃಷ್ಟದಿಂದ ತಂದೆತಾಯ್ಗಳನ್ನು ಕಳೆದು ಕೊಂಡು ಊರು, ಜನ, ಮನೆ, ಎಲ್ಲಾ ಉರಿದು ನಾಶ ವಾಗಿರಲು, ಅವನ್ನು ನಾಶಮಾಡಿ ತನ್ನನ್ನು ತಬ್ಬಲಿಗೊಳಿಸಿದ

---

[1] ಎತ್ತಿ ಕರಂಗಳಿಂದೆ ನಿಜಬಾಷ್ಪ ನಿರುದ್ಧಂ ಎನಿಪ್ಪ ಕಣ್ಗಳಿಂ (ದ) ಒತ್ತಿ ಶರೀರದೊಳ್ ಪುಗಿಸಿ ಕೊಂಡಪನ್ ಎಂಬಿನಂ ಆದಂ ಅಪ್ಪುತುಂ ಚಿತ್ತದ (ಅ) ಲಂಪಿನಿಂ ಕಿರುಳನಂತಿರಲ್ ಎನ್ನಯ ಮಾಯ್ದ ಕಾಲ್ಗಳಂ ನೆತಿಯೊಳ್ ಇಟ್ಟುಕೊಂಡು ಅಳುತುಂ ಇರ್ದನ್ ಅಳಲ್ದು ಎನಸುಂ ಕಪಿಂಜಲಂ.

ಅರಸನ ಮಗನಿಗೇ ಕೆಳದಿಯಾಗಿ ಅಡಪದ ಊಳಿಗದಲ್ಲಿ ನಿಂತು ಆತನು ಮತ್ತೊಬ್ಬಳನ್ನು ಪ್ರೀತಿಸುವಾಗ ಆ ಪ್ರಿಯರ ಪ್ರೇಮಾಭಿವೃದ್ಧಿ ಕಾರ್ಯದಲ್ಲಿ ತೊಡಗಿದ ಪತ್ರಲೇಖೆಯ ಭಕ್ತಿ, ತ್ಯಾಗಭೋಗ ಅಸದೃಶವಾದವು. ಅಂತೆಯೇ ಚಂದ್ರನು ಭೂಮಿಯಲ್ಲಿ ಹುಟ್ಟಬೇಕಾಗಿ ಬರಲು ಎಷ್ಟು ಬೇಡವೆಂದರೂ ಕೇಳದೆ ಆತನ ಹಿಂದೆ ಭೂಮಿಗೆ ಬಂದು ನೆಳಲಂತೆ ಹಿಂಬಾಲಿಸುತ್ತಿದ್ದು ಸುಖದುಃಖಗಳಲ್ಲಿ ಭಾಗಿಯಾಗಿ ಆತನು ಜನ್ಮಾಂತರಕ್ಕೆ ಹೋಗುವ ಸಮಯದಲ್ಲಿ ಮುಂದಿನ ಮಂಗಳಕ್ಕೆ ಸಾಧಕವಾದ ಕಾರ್ಯವನ್ನು ಮಾಡಿದುದು ಆ ಪತ್ರಲೇಖೆ–ರೋಹಿಣಿಯ ಭವ್ಯ ಸತೀತ್ವದ ಕುರುಹಾಗಿದೆ. ಕೆಳದಿಯರು, ಸೇವಕರು, ರಾಣಿವಾಸದವರು, ಮಂತ್ರಿಜನ, ತಾಯ್ತಂದೆಯರು, ಅತ್ತೆ ಸೊಸೆಯರು, ಬೀಗರು ಎಲ್ಲರೂ ಎಷ್ಟು ಸುಮನಸರಾಗಿ ನಡೆದುಕೊಳ್ಳಬಹುದೆಂಬುದಕ್ಕೆ ಕಾದಂಬರಿಯ ಪ್ರಸಂಗ ಪ್ರಸಂಗದಲ್ಲಿಯೂ ಉದಾಹರಣೆ ಇದೆ.

ಆದುದರಿಂದಲೇ ಈ ಕಾವ್ಯದಲ್ಲಿ ವಿಷಮವಾದ ಒಂದು ಸಂದರ್ಭ ಒದಗಿದರೂ ಕೊಲೆಯಷ್ಟು ಕರ್ಕಶವಾಗುವುದು.

* * *

ಎರಡು ಪ್ರಸಂಗಗಳಿಂದ ಒಂದೊಂದು ಸಣ್ಣ ಪದ್ಯವನ್ನೆತ್ತಿ ಇಲ್ಲಿನ ನಡತೆಯಲ್ಲಿಯೂ ಕವಿದರ್ಶನದಲ್ಲಿಯೂ ಹೊಮ್ಮಿರುವ ಸರಸವಿರಸಗಳ ಒಂದೊಂದು ಚಿತ್ರವನ್ನು ತೋರಿಸಿ ಈ ಸಮಾಲೋಚನೆಯನ್ನು ಮುಗಿಸಬಹುದು.

೧. ಗಿಳಿ ಶೂದ್ರಕಮಹಾರಾಜನಿಗೆ ಜಯಾಶೀರ್ವಾದ ಮಾಡುವ ಆರ್ಯೆ ಪ್ರಖ್ಯಾತವಾದ್ದು. ತಿರ್ಯಕ್‌ಜಾತಿಯಲ್ಲಿ ಈ ಚಾತುರ್ಯ ಇದೇನೆಂದು ಸಭೆ ಸೋಜಿಗ ಪಡುವಂತಹ ನಡತೆ, ವಾಣಿ ಆದರದು. ವರ್ಣ ಮಾತ್ರ ಸ್ವರ ರುಚಿರವಾದ

ಆರ್ಯೆಯನ್ನು ವ್ಯಕ್ತವಾಗಿ, ಅಸ್ಖಲಿತವಾಗಿ, ಸುಲಲಿತವೆಂಬಂತೆ ಅದು ಹೇಳಿತು. ಹರಕೆ ರಾಜನಿಗೆ ಜಯವಾಗಲಿ ಎಂದು. ಆದರೆ ಈ ಪದ್ಯದಲ್ಲಿ ಅಡಗಿರುವ ಭಾವ ದುಸ್ಸಹವಾಗಬಲ್ಲದು.

ಸ್ತನಯುಗಂ ಅಶ್ರುಸ್ನಾತಂ
ಸಮೀಪತರವರ್ತಿ ಹೃದಯಶೋಕಾಗ್ನೇಃ
ಚರತಿ ವಿಮುಕ್ತಾಹಾರಂ
ವ್ರತಂ ಇವ ಭವತೋ ರಿಪು ಸ್ತ್ರೀಣಾಂ

ರಾಜನಿಗೆ ಜಯವಾಗಲಿ ಎನ್ನಿ. ರಾಜನ ಹಗೆಗಳು ಹೆಸರಿಲ್ಲದೆ ಅಳಿಯಲಿ ಎನ್ನಿ. ಅವರ ಹೆಂಡಿರು ವಿಧವೆಯರಾಗಲಿ ಎಂಬ ಬರ್ಬರತೆಯ ಮೂಲಕ ಏಕೆ ಹರಸಬೇಕು? ಇವನಿಗೆ ಕೆಡುಕು ಮಾಡದ ಹೆಣ್ಣುಗಳ ಅಳಲು, ವೈಧವ್ಯದ ನೋವು, ಬೇಗೆ, ಕಣ್ಣೀರುಗಳನ್ನು ಮಹಾಪೂರವಾಗಿ ವರ್ಣಿಸಿ, ಹೆಣ್ಣುಗಳಾದ ಅವರಿಗೆ ತಾಳಲಾಗದ ಅಳುವನ್ನು ತರುವುದು ಏನು ವೀರ ವರ್ತನೆ? ಹಿಂದೂ ಸಮಾಜದಲ್ಲಿ ವೈಧವ್ಯದುಃಖ ಅಳೆಯ ತೀರದ್ದು: ನುಡಿದು ಮುಗಿಯದ್ದು. ಈ ದೇಶದಲ್ಲಿ ಆ ಚಿತ್ರದ ಉರಿಬೇಗೆಯನ್ನು ಬಾಯಿ ಚಪ್ಪರಿಸುತ್ತ ವರ್ಣಿಸಬಾರದೆನ್ನಿಸುತ್ತದೆ. ಒಂದು ಸಂಪ್ರದಾಯವೇ ಈ ಬಗೆಯ ಚಮತ್ಕಾರವನ್ನು ಇನ್ನೂ ಮೆಚ್ಚುತ್ತಿದೆಯಾದ್ದರಿಂದ ಈ ಮಾತನ್ನು ನುಡಿಯುತ್ತಿದೆ. ಇಲ್ಲಿನ ಶ್ಲೇಷೆಯ ಅಂಶ ಅಂಶವೂ ಅನಾರ್ಯ:

ವೀರರ ವೀರ, ನಿನ್ನ ಹಗೆಗಳ ಮಡದಿಯರ ಎರಡೂ ಸ್ತನ, ಕಣ್ಣೀರಿಂದ ಮಿಂದು, ಎದೆಗಿಚ್ಚಿಂದ ಬೆಂದು, ವಿಮುಕ್ತಾಹಾರವಾಗಿ, ತಪಸ್ಸನ್ನು ಆಚರಿಸುವುವು. ವ್ರತಕ್ಕೆ ಸ್ನಾನ, ಬೆಂಕಿಯ ತಾಪ, ಆಹಾರವಿಲ್ಲದ 'ಉಪವಾಸ' ಬೇಕಷ್ಟೆ? ಇಲ್ಲಿ ಅಂತಹ ವ್ರತವಿದೆ ನೋಡಿ. ಶೂದ್ರಕನು ಗೆದ್ದ ಕಾರಣದಿಂದ ಅವನ

ಹಗೆಗಳ ಮಡದಿಯರ ಐದೆತನ ಹರಿಯಿತು; ಅತಿ ಹತ್ತಿರದಲ್ಲಿ ಉರಿಯುವ ಎದೆಗಿಚ್ಚಿಂದ ಅವರ ಸ್ತನ ಬೇಯುತ್ತಿವೆ; ಸುರಿಯುವ ಕಣ್ಣೀರಿಂದ ಸ್ನಾನಮಾಡುತ್ತಿವೆ; ಸೌಮಂಗಲ್ಯ ಸೂಚಿಯಾಗಿ ಮೇಲಾಡುವ ಕೊರಲ ಮುತ್ತಿನಹಾರ ಇಲ್ಲವಾಗಿದೆ. ಇದು ಯಾವ ಬಗೆಯ ಗೆಲವನ್ನು ಮೆರಸುವ ಧರ್ಮವೃತ್ತಿಯೋ ಸಹೃದಯರು ಯೋಚಿಸಬೇಕು. ಹರಸುವುದಾದರೂ ಯಾರು? ಗಿಳಿ. ವೈಶಂಪಾಯನ–ಪುಂಡರೀಕ! ಪ್ರೇಮದ ಅಗಲಿಕೆ ಎಂಥದು, ಅದರ ಪರಿಣಾಮವೇನು ಎಂಬುದರ ಅರಿವು ಯಾರಿಗಾದರೂ ಪೂರ್ಣವಾಗಿರುವುದು ಶಕ್ಯವಾದರೆ ಮೂರು ಹುಟ್ಟುಗಳಲ್ಲಿ ಅನುಭವಿಸಿ ತಿಳಿದಿದೆ—ಗಿಳಿ. ತನ್ನ ಅಗಲಿಕೆಯಿಂದ ಮಹಾಶ್ವೇತೆ ಏನಾಗಿದ್ದಾಳೆಂದು ಅದಕ್ಕೆ ಗೊತ್ತಿದೆ. ಪ್ರೇಮದ ಶುಚಿಸಂಪತ್ತಿಯನ್ನು ಬೆಳಗುವ ಮಹಾಕಾವ್ಯದಲ್ಲಿ ಮಂಗಳಾಚರಣದಂತಿರುವ ಈ ಪದ್ಯವನ್ನು ಗಿಳಿಯ ಬಾಯಲ್ಲಿ ಹೇಳಿಸುವುದು ಸರಿಯಲ್ಲವೆನಿಸುತ್ತದೆ. ಕವಿ ಈ ನಮ್ಮ ವಿಪರೀತ ರೀತಿಯಲ್ಲಿ ಯೋಚಿಸಲಿಲ್ಲ ನಿಜ. ಅದಕ್ಕೆ ಎಷ್ಟು ಪಾಂಡಿತ್ಯವಿತ್ತು ಎಂದು ತೋರಿಸಿ ಬೆರಗುಗೊಳಿಸುವುದು, ಶೂದ್ರಕನ ಕೌತುಕವನ್ನು ಕೆರಳಿಸುವುದು ಅವನ ಉದ್ದೇಶ. ಕಾವ್ಯದಲ್ಲಿನ ವೈಧವ್ಯ, ಅಳಲು, ಮುತ್ತಿನಹಾರ, ತಪಸ್ಸುಗಳನ್ನು ಬಳಸಿನಲ್ಲಿ ತೋರಿಸುವ ಇಚ್ಛೆಯೂ ಆಗಿರಬಹುದು. ಉಕ್ತಿಚಾತುರ್ಯದ ಮೂಲಕ ಅರ್ಥಪ್ರೌಢಿಯನ್ನು ಕಾಣಿಸುವ ಪದ್ಯವನ್ನು ಬರೆದು ಜಗತ್ತಿನ ಮೆಚ್ಚುಗೆ ಬೇಡಿದ–ಕವಿ. ಆ ಮೆಚ್ಚುಗೆ ಕೊಡಬಹುದು. ಆದರೆ ಕಾವ್ಯದ ಮೊದಲ ರಾಜಾಶೀರ್ವಾದವಾಗಿ ಇಂತಹ ಪದ್ಯ ಇರುವುದು ಬೇಡವೆನ್ನಿಸುತ್ತದೆ.

೨. ಕಾದಂಬರಿಯಿಂದ ಚಂದ್ರಾಪೀಡನು ಮೊದಲ ಸಲ

ಬೀಳ್ಕೊಳ್ಳಲು ಬಂದಾಗ ಮಹಾಶ್ವೇತೆಯ ಬಾಯಲ್ಲಿ ಹೇಳಿಸುವ ಮಾತು ದಿವ್ಯವಾದುದು. ಒಟ್ಟು ಆ ಬೆಳಗ್ಗಿನ ಸನ್ನಿವೇಶವೇ ಬಹುರಮಣೀಯ:

ಒಂದು ದಿನದ ಮಟ್ಟಿಗೆ ಬಂದು ವಿಶ್ರಮಿಸಿ ಹೋಗಬೇಕೆಂದು ಹೇಳಿ ಆತನನ್ನು ಮಹಾಶ್ವೇತೆ ಕರೆದುತಂದಿದ್ದಳು. ಬಂದ ದ್ದಾಯಿತು. ಊರು ನೋಡಿದ್ದಾಯಿತು. ಊರ ಕಣ್ಣಿಗೆ ಉತ್ಸವ ಉಂಟುಮಾಡಿ ಆಯಿತು. ಯಾರು ಸುಖಪಟ್ಟರೆ ಊರು ಸುಖಪಡಬಲ್ಲದಿತ್ತೊ ಆಕೆಯನ್ನು ಪಡಿಸಿಯಾಯಿತು. ಆತನು ಹಿಂದಿರುಗುವುದು ಯಾರಿಗೂ ಇಷ್ಟವಿಲ್ಲ. ಆದರೆ ಅಗತ್ಯ. ಬೆಳಿಗ್ಗೆ ಕುಮಾರನು ಬಂದಿದ್ದಾನೆ. ಬಾಯಿಂದ ಮಾತು ಹೊರಡದು. ಮಹಾಶ್ವೇತೆಯ ಮುಖವನ್ನು ದೀನಮಂದಹಾಸ ದಿಂದ ನೋಡಿದ್ದಾನೆ. ಆಕೆಗೆ ಅಭಿಪ್ರಾಯವಾಗುತ್ತದೆ. ಆಗ ಕಾದಂಬರಿಯನ್ನು ಕುರಿತು ಮಹಾಶ್ವೇತೆ,—

ಬೆಳುದಿಂಗಳಿಂದ ಕರಗುವ ಚಂದ್ರಶಿಲೆಯಂತೆ, ನಿನ್ನ ಗುಣ ಗಳಿಂದ, ಚಂದ್ರಮುಖಿ, ನಾಂದನಾಗಿ ನರೇಂದ್ರನು ನುಡಿ ಯಲೂ ಆರನಾಗಿದ್ದಾನೆ; ಹೋದೆಡೆಯನ್ನರಿಯದೆ ಬಿಡದೆ ಹುಡುಕುತ್ತ, ಹೇಗಿರುವನೊ ಎನ್ನುತ್ತ ಉಮ್ಮಳದಿಂದ ಹಿಂದುಳಿದ ರಾಜಲೋಕವೆಲ್ಲ ಕುಮಾರನನ್ನು ಕಾಣುವವರೆಗೂ ಮರುಗದೆ ಇರದು;

ಕಮಲಿನಿಗೆ ಕಮಲಬಂಧುಗೆ
ಕುಮುದಿನಿಗೆ ಆ ಕುಮುದಿನೀಶ್ವರಂಗೆ ಎಂತೀಗಳ್
ತಮಗೆ ಅಂತಿರ್ಪ ಎಡೆಗಳ್ ದೂ
ರಮಾದೊಡಂ ಪ್ರೀತಿ ಮಾಣದು ಆಕಲ್ಪಾಂತಂ.

ಅದರಿಂದ ಅರಸಂಗೆ ಪೋಗಲ್ವೇಳ್ಕುಂ—ಅನ್ನುವಳು. ಈ ಪದ್ಯದ

ಮಟ್ಟದಲ್ಲಿ ರಸಪೋಷಣೆ ಮಾಡುವ ಪದ್ಯಗಳು ಸಾಹಿತ್ಯದಲ್ಲಿ ಹಲವಿಲ್ಲ. ಹೋಗಲೇಬೇಕಾದ್ದರಿಂದ ಅಪ್ಪಣೆ ಬೇಡುತ್ತಾನೆ. ಒಂದು ದಿನದ ಕಂಡ ಮಟ್ಟಿಗೆ ನಮಗೇ ಅಗಲುವುದು ಹೀಗೆ ಕಷ್ಟವಾದರೆ ಜೊತೆಯುವರು ಇನ್ನೆಷ್ಟು ಕಾತರರಾಗಿರಬೇಡ! ಅಪ್ಪಣೆ ಕೊಡುವುದು ನಿನಗೆಷ್ಟು ಕಷ್ಟವೊ ಕೇಳುವುದು ಆತನಿಗೂ ಅಷ್ಟೇ ಕಷ್ಟವೆಂದು ನನಗೆ ಗೊತ್ತಿದೆ. ಮಾಡುವುದೇನು? ಬೇರೆ ದಾರಿಯಿಲ್ಲ. ನಿಮಗೆ ಒಂದು ತತ್ವ ತಿಳಿಯಬೇಕು: ಪ್ರೇಮ ನಿಜವಾದ ಪಕ್ಷದಲ್ಲಿ ಅಗಲಿಕೆಯಿಂದ ಅದಕ್ಕೆ ಚ್ಯುತಿಬಾರದು. ಆಕಲ್ಪಾಂತಂ. ಕಲ್ಪಗಳು ಮುಗಿಯುವವರೆಗೂ ಅದು ನಿಲ್ಲುತ್ತದೆ. ಅಥವಾ, ಬಾಣ ಹೇಳುವಂತೆ 'ಆಪ್ರಳಯಂ'–ವಿಶ್ವಕ್ಕೆ ಪ್ರಳಯ ಬಂದೀತು, ಪ್ರೀತಿ ಕುಂದದು. ಇದಕ್ಕೆ ಪ್ರಮಾಣವೇನೆನ್ನುವಿರೊ? ನಾನು.[1] ನೀವು ಯೋಚಿಸ ಕೆಲಸವಿಲ್ಲ. ನಿಮ್ಮ ಪ್ರೇಮ ನಿಮ್ಮನ್ನು ಎತ್ತುವುದು, ಉಳಿಸುವುದು. ಅಗಲಿ ದೂರವಿರುವುದು ನೋವೆಂಬುದು ನಿಜ. ನಾನು ಅನುಭವಿಸಿಲ್ಲವೆ? ಅನುಭವಿಸುತ್ತಿಲ್ಲವೆ? ಅಗಲಿಕೆಯಿಂದ ಪುಂಡರೀಕನಿಗೆ ಏನು ತಾಪ ಬರಲಿಲ್ಲ. ನನ್ನ ಜೊತೆಗೆ ಪ್ರಕೃತಿಯೂ ಇದಕ್ಕೆ ಸಾಕ್ಷಿ. ಪ್ರಕೃತಿಯಲ್ಲಿ ಇದರ ಸತ್ಯ ಸ್ಥಾಪಿತವಾಗಿದೆ. ಕುಮುದಕ್ಕೂ ಚಂದ್ರನಿಗೂ ಎಷ್ಟು ದೂರವಿಲ್ಲ? ಕಮಲಕ್ಕೂ ಸೂರ್ಯನಿಗೂ ಇನ್ನೆಷ್ಟಿಲ್ಲ? ಅವಕ್ಕಿರುವ ಪ್ರೇಮ ಇವೊತ್ತಿನದೆ? ಇಲ್ಲವೆ ನಾಳೆಗೆ ಮುಗಿಯುವದೊ? ಧ್ರುವ ಸತ್ಯವಲ್ಲವೆ? ಅಂತಪ್ಪ ಎಡೆಗಳಲ್ಲಿ ಆ ಪ್ರಳಯಂ

[1] ನಾನು ಎಂಬುದನ್ನು ಆಕೆ ನುಡಿದಿಲ್ಲ—ಅದು ಧ್ವನಿತ. ಆಕೆಯ ಮನಸ್ಸು, ತಿಳಿವಳಿಕೆ ಹಾಗಿವೆ. ಆ ವಿಶ್ವಾಸದಲ್ಲಿ ಬದುಕಿದ್ದಾಳೆ. ಪ್ರಳಯವನ್ನು ಲೆಕ್ಕಿಸದೆ ಶಾಶ್ವತವಾಗಿ ಪ್ರೀತಿಸಲು ವ್ರತ ಹೊತ್ತಿದ್ದಾಳೆ.

ಪ್ರೀತಿ ಮಾಣದು. ಚಿಂತೆ ಬೇಡ, ಕಳಿಸಿಕೊಡು ಎಂದು ಆಕೆ ನುಡಿಯುತ್ತಿದ್ದಾಳೆ.

ಅಗಲಿ ಪ್ರಿಯನನ್ನು ಕಳೆದುಕೊಂಡು ದುಃಖವನ್ನನುಭವಿಸುತ್ತಿರುವ ಆಕೆ ಈಗ ಯಜಮಾನಿಯಾಗಿ ಕೆಲಸಮಾಡಬೇಕಾಗಿದೆ. ಮಾಡುತ್ತಾಳೆ. ಅರಿಯದ ಹುಡುಗಿಯನ್ನು ಪ್ರೇಮದ ತೊಡಕಿಗೆ ತಾನಾಗಿ ಸಿಕ್ಕಿಹಾಕಿ ಇದರಿಂದ ಇನ್ನು ಯಾವ ನೋವು ಹುಟ್ಟಿಕೊಳ್ಳುವುದೊ ಎಣಿಸದೆ ಪ್ರಿಯರ ಅಗಲಿಕೆಗೆ ಕರಗಹೊತ್ತಳೆಂಬಂತೆ ಅಗಲಿಕೆಗೆ ಅಪ್ಪಣೆಕೊಡು ಎಂದು ಪ್ರಾಣಸಮಾನಳಾದ ಗೆಳತಿಯನ್ನು ಕೇಳುತ್ತಿದ್ದಾಳೆ. ಎಂತಹ ಪ್ರಸಂಗ! ಕಮಲ ಸೂರ್ಯರ, ನೈದಿಲೆ ಚಂದ್ರರ ಸಾಮ್ಯ ಸಾಹಿತ್ಯ ಹುಟ್ಟಿದಂದಿನಿಂದ ಬಂದು ಬಂದು ಅದರ ಅರ್ಥಶಕ್ತಿ ಸವೆದುಹೋಗಿದೆ. ಆದರೆ ಇಲ್ಲಿ ಎಂತಹ ಪ್ರಮಾಣವಾಗುತ್ತಿದೆ, ಅವುಗಳ ಶಾಶ್ವತ ಸಂಬಂಧ! ಅದರ ಸಮಾನವಾದ ಅಮೃತ ಸತ್ವ, ತನ್ನ ಪುಂಡರೀಕರ ಪ್ರೇಮ; ಕಾದಂಬರಿ ಚಂದ್ರಾಪೀಡರ ಪ್ರೇಮಾನುಬಂಧ. ಅಷ್ಟೇ ಸತ್ಯ, ಅಷ್ಟೇ ಗಾಢ. ಈ ಸಂಗತಿ ಸನ್ನಿವೇಶಕ್ಕೆ ತಿಳಿವಿನ ಬೆಳಕನ್ನು ಬೀರಿ ತಾಳ್ಮೆ ಬೇಡುತ್ತದೆ. ಮೂರು ಅನಂತ ಪ್ರಪಂಚಗಳ ಕೆಳೆಸಾಮ್ಯವನ್ನು ಸೃಷ್ಟಿಮಾಡಿ ಅರ್ಥ ಬೆಳೆದು ನಿಲ್ಲುತ್ತದೆ. ಭೂಮಿ ಆಕಾಶಗಳನ್ನೂ ಮಾನವ ಜೀವವನ್ನೂ ಜೀವನದ ಪ್ರೇಮವನ್ನೂ ಒಂದೇ ಬಗೆಯ ಇನ್ನೊಂದು ತ್ರಿಲೋಕೀಸಹಚರಿ ಸತ್ವವೆಂದು ತೋರಿಸಿಕೊಡುವುದು. ಭಾವಪೋಷಣೆ ಮಾಡುವುದು. ಚಾರಿತ್ರಗಳಿಗೆ ಸ್ಥೈರ್ಯ ತಂದುಕೊಡುವುದು.

ಕವಿಶಕ್ತಿ ಇದಕ್ಕಿಂತ ಮಿಗಿಲಾದುದಾವುದನ್ನು ಮಾಡಬಲ್ಲದು? ಈ ಬಗೆಯ ವ್ಯಕ್ತಿ, ಉಕ್ತಿಗಳಿಂದಲೇ ಕಾವ್ಯಕ್ಕೆ ಸಫಲತೆ.

WO 2622—MUPM—3,000 copies—7-9-64

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧ ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨ ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩ ತೆರಿಗೆ—ಬಿ. ಆರ್. ಸುಬ್ಬರಾವ್
೪ ನವರತ್ನಗಳು—ಎಚ್. ಸುಬ್ಬಾಜೋಯಿಸ್
೫ ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ
೬ ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭ ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮ ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯ ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦ ಪಂಪ—ತೀ. ನಂ. ಶ್ರೀಕಂಠಯ್ಯ
೧೧ ಪ್ರಾಣಿಜೀವನ—ಎ. ನಾರಾಯಣರಾವ್
೧೨ ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩ ಮದುವೆ—ನಾ. ಕಸ್ತೂರಿ
೧೪ ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫ ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬ ಬೆಳಕು—ಟಿ. ಎಸ್. ಸುಬ್ಬರಾಯ
೧೭ ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮ ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯ ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ-ಪಿ. ಜಿ. ಸತ್ಯಗಿರಿನಾಥನ್
೨೦ ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧ ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್
೨೨ ಶಿಶುವಿಹಾರಗಳು—ಸಿ. ರಂಗಾಚಾರ್
೨೩ ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ
೨೪ ವಿಡಂಬನ—ಎಸ್. ವಿ. ರಂಗಣ್ಣ
೨೫ ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

೨೬ ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್
೨೭ ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೨೮ ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ
೨೯ ಸರ್ವಜ್ಞ ಕವಿ—ಎ. ಆರ್. ಕೃಷ್ಣಶಾಸ್ತ್ರೀ
೩೦ ರಕ್ತ—ಡಿ. ಶಾಮಣ್ಣ
೩೧ ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೩೨ ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೩೩ ಗಣಿತಶಾಸ್ತ್ರದ ಸ್ವರೂಪ

—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್

೩೪ ಋಗ್ವೇದ—ಎಂ. ಎ. ಕೃಷ್ಣಸ್ವಾಮಿ
೩೫ ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೩೬ ಆಳ್ವಾರುಗಳು—ಎಂ. ಯಾಮುನಾಚಾರ್ಯ
೩೭ ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು

—ವಿ. ರಾಘವೇಂದ್ರರಾವ್

೩೮ ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ
೩೯ ಮಕ್ಕಳ ಭಾವಜೀವನ—ಡಾ॥ ಬಿ. ಕುಪ್ಪುಸ್ವಾಮಿನಾಯಿಡು
೪೦ ಸಹಕಾರ—ಎಸ್. ಗೋಪಾಲಸ್ವಾಮಿ
೪೧ ನಯಸೇನ—ಜಿ. ವೆಂಕಟಸುಬ್ಬಯ್ಯ
೪೨ ಕೌಟಿಲ್ಯ—ಡಾ॥ ಎಂ. ವಿ. ಕೃಷ್ಣರಾವ್
೪೩ ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೪೪ ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್
೪೫ ಲಕ್ಷ್ಮೀಶ—ಎನ್. ಅನಂತರಂಗಾಚಾರ್
೪೬ ರುಚಿ—ಎಸ್. ವಿ. ರಂಗಣ್ಣ
೪೭ ಕೀಟಗಳು—ಡಿ. ಎಸ್. ವೀರಯ್ಯ
೪೮ ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್
೪೯ ಮುದ್ರಣ—ಟಿ. ಎಸ್. ಶಾಮರಾವ್
೫೦ ಐವರು ಭೌತ ವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್
೫೧ ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ
೫೨ ಚೀನರ ಇತಿಹಾಸ ಮತ್ತು ನಾಗರಿಕತೆ

—ಎಸ್. ವೆಂಕಟದೇಶಿಕಾಚಾರ್

೫೩ ಯುದ್ಧಕಾಲದ ಆರ್ಥಿಕ ಸಮಸ್ಯೆಗಳು
—ಎಸ್. ಲಕ್ಷ್ಮೀನರಸಿಂಹನ್
೫೪ ಆಹಾರ—ಜಿ. ಆರ್. ಲಕ್ಷ್ಮಣರಾವ್.
೫೫ ಇಬ್ಸನ್ನಿನ ಕೆಲವು ನಾಟಕಗಳು—ಎಸ್. ಮಂಜುನಾಥ್
೫೬ ಶಬ್ದಪ್ರಪಂಚ—ಆರ್. ಎಲ್. ನರಸಿಂಹಯ್ಯ
೫೭ ಪ್ರಜಾಭಿಪ್ರಾಯ—ಟಿ.ಎಸ್. ರಾಜಗೋಪಾಲ ಅಯ್ಯಂಗಾರ್
೫೮ ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್
೫೯ ಜನಪದಮುಕ್ತಕಗಳು-ಎಚ್.ಎಂ. ಶಂಕರನಾರಾಯಣರಾವ್
೬೦ ಹಾಲು—ಕೆ. ಎಸ್. ಲಕ್ಷ್ಮಣರಾವ್
೬೧ ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೬೨ ಭಾರತದಲ್ಲಿ ಪ್ರಜಾಪ್ರಭುತ್ವ
—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್
೬೩ ಆರೋಗ್ಯಸಾಧನೆ—ಮೋಟಗಾನಹಳ್ಳಿ ಮಹದೇವಶಾಸ್ತ್ರೀ
೬೪-೬೫ ಆಧುನಿಕ ಭಾರತದಲ್ಲಿ ನೃತ್ಯಕಲೆ—ಯು. ಎಸ್. ಕೃಷ್ಣರಾವ್
ಮತ್ತು ಚಂದ್ರಭಾಗಾದೇವಿ

ಸಾದಾ ಪ್ರತಿ ೫೦ ಪೈಸೆ ; ಉತ್ತಮ ಪ್ರತಿ ೭೫ ಪೈಸೆ

೬೬ ಚುನಾವಣೆಗಳು—ಗ. ಸ. ಹಾಲಪ್ಪ
೬೭ ಮೀನಿನಿಂದ ಮಾನವನೆಡೆಗೆ—ಎಚ್. ಬಿ. ದೇವರಾಜ ಸರ್ಕಾರ್
೬೮ ಕ್ಷಯ—ಡಾ|| ಎಸ್. ಟಿ. ಪುಟ್ಟಣ್ಣ
೬೯ ಶಿಲ್ಪಿಯ ಪಾತ್ರ—ಬಿ. ಎಲ್. ಸಿ. ರಾಜನ್
೭೦ ಪರತಂತ್ರ ಜೀವಿಗಳು ಮತ್ತು ಪರತಂತ್ರ ಜೀವನ
—ಎಚ್. ಬಿ. ದೇವರಾಜ ಸರ್ಕಾರ್
೭೧ ಮಾನವ ಹಕ್ಕುಗಳು—ಹೆಚ್. ಎಂ. ಸದಾಶಿವಯ್ಯ
೭೨ ವಿನೋದ ಗಣಿತ—ವಿ. ಕೆ. ದೊರೆಸ್ವಾಮಿ
೭೩ ಸಾಬೂನು—ಕೆ. ಎಸ್. ಲಕ್ಷ್ಮಣರಾವ್
೭೪ ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ
೭೫ ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ—ಶ್ರೀ ನಾಗಭೂಷಣ
೭೬ ಮಹಾಭಾರತ—ಡಾ|| ಕೆ. ಕೃಷ್ಣಮೂರ್ತಿ
೭೭ ಜೇನು—ಡಿ. ಎಸ್. ಮುರಿಗಪ್ಪ ಶ್ರೇಷ್ಠಿ
೭೮ ಮಾನವಶಾಸ್ತ್ರ—ಡಾ|| ಕೆ. ಎನ್. ವೆಂಕಟರಾಯಪ್ಪ
೭೯ ಅಥರ್ವವೇದ—ಸಿ. ಜಿ. ಪುರುಷೋತ್ತಮ

೮೦ ನೇಮಿಚಂದ್ರ—ಎನ್. ಅನಂತರಂಗಾಚಾರ್
೮೧-೮೨ ಹಾಸ್ಯ—ಎಸ್. ವಿ. ರಂಗಣ್ಣ
೮೩ ಶ್ರೀನಾಥ—ಕೆ. ವೆಂಕಟರಾಮಪ್ಪ
೮೪ ಷಡಕ್ಷರದೇವ—ದೇ. ಜವರೇಗೌಡ
೮೫ ಚಿತ್ರಾಂಗದಾ—ಯು. ಕೆ. ಸುಬ್ಬರಾಯಾಚಾರ್
೮೬ ಸಂಚಿಯ ಹೊನ್ನಮ್ಮ
—ಎಚ್. ಎಂ. ಶಂಕರನಾರಾಯಣರಾವ್
೮೭ ವಾಲ್ಮೀಕಿ ರಾಮಾಯಣ—ಯು. ಕೆ. ಸುಬ್ಬರಾಯಾಚಾರ್
೮೮ ಜಪಾನರ ಇತಿಹಾಸ ಮತ್ತು ನಾಗರಿಕತೆ—ಕೆ. ಪದ್ಮಾವತಮ್ಮ
೮೯ ಕ್ರಿಶ್ಚಿಯನ್ ಕ್ಯಾಲೆಂಡರ್—ಬಿ. ಸೀತಾರಾಮಶಾಸ್ತ್ರೀ
೯೦ ಆಲ್‌ಫ್ರೆಡ್ ನೊಬೆಲ್—ಎಸ್. ಸುಬ್ರಹ್ಮಣ್ಯಂ
೯೧ ಗೃಹರಚನಾವಿಧಿ—ಕೆ. ಎಸ್. ಸದಾನಂದ
೯೨ ಹಿಂದೂಧರ್ಮಸಾರ—ಸ್ವಾಮಿ ಸೋಮನಾಥಾನಂದ
೯೩ ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳು
—ಟಿ. ಎಸ್. ರಾಜಗೋಪಾಲ್ ಅಯ್ಯಂಗಾರ್
೯೪ ದಾರಿತಪ್ಪಿದ ಮಕ್ಕಳು—ಎನ್. ಎಸ್. ಶಾಂತಮ್ಮ
೯೫ ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೯೬ ಪ್ರೇರಣೆ—ಕೆ. ನಾಗರಾಜಶಾಸ್ತ್ರಿ
೯೭ ಪ್ರಾಣಿಗಳ ರಚನಾ ಕೌಶಲ
—ಎಚ್. ಬಿ. ದೇವರಾಜ ಸರ್ಕಾರ್
೯೮ ಭಾರತೀಯ ರಾಷ್ಟ್ರೀಯತೆಯ ವಿಕಾಸ
—ಎ. ಎಸ್. ನಂಜುಂಡಸ್ವಾಮಿ
೯೯ ಶ್ರೀಹರ್ಷ—ಸಿ. ಅನಂತಾಚಾರ್
೧೦೦ ಪ್ರಸಾರಾಂಗ—ಡಾ|| ಕೆ. ವಿ. ಪುಟ್ಟಪ್ಪ
೧೦೧ ಷಟ್‌ಸ್ಥಲ ಸಿದ್ಧಾಂತ—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ
೧೦೨ ಶಕ್ತಿವಿಶಿಷ್ಟಾದ್ವೈತವೇದಾಂತ—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ
೧೦೩ ಉಪನಿಷತ್ ಪರಿಚಯ—ಸ್ವಾಮಿ ಸೋಮನಾಥಾನಂದ
೧೦೪ ತುಲಸೀದಾಸ—ಡಾ|| ಹಿರಣ್ಮಯ
೧೦೫ ಸಿಹಿಮೂತ್ರರೋಗ—ಡಾ|| ಎ. ನಾರಾಯಣಪ್ಪ
೧೦೬ ಭಾರತದಲ್ಲಿ ವಿಮೆ—ಕೆ. ಗೋಪಾಲ್

೧೦೭ ಸಕ್ಕರೆ—ಕೆ. ಎಸ್. ಲಕ್ಷ್ಮಣರಾವ್
೧೦೮ ಕಲಾಯ್ಡ್ ವಿಜ್ಞಾನ—ಕೆ. ಎಸ್. ಲಕ್ಷ್ಮಣರಾವ್
೧೦೯ ಎಕ್ಸ್-ಕಿರಣಗಳು—ಕೆ. ಶೇಷಾದ್ರಿ ಅಯ್ಯಂಗಾರ್
೧೧೦ ವೇಮನ—ಕೆ. ವೆಂಕಟರಾಮಪ್ಪ
೧೧೧ ವಾಯುಮಂಡಲ—ಕೆ. ಎಸ್. ಲಕ್ಷ್ಮಣರಾವ್
೧೧೨ ಅಂತರಿಕ್ಷಯಾನ—ವೈ. ವಿ. ಇಂದಿರಾಬಾಯಿ
೧೧೩ ಹತ್ತಿ—ಕೆ. ಎಸ್. ಲಕ್ಷ್ಮಣರಾವ್
೧೧೪ ಕನ್ನಡದಲ್ಲಿ ಅನುಭಾವ ಸಾಹಿತ್ಯ
—ಡಾ|| ಹೆಚ್. ತಿಪ್ಪೇರುದ್ರಸ್ವಾಮಿ
೧೧೫ ಅಲ್ಲಮಪ್ರಭು—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ
೧೧೬ ಕಾಳಿದಾಸನ ನಾಟಕಗಳು—ಡಾ|| ಕೆ. ಕೃಷ್ಣಮೂರ್ತಿ
೧೧೭ ಅಣ್ಣನ ಆದರ್ಶ—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ
೧೧೮ ನಮ್ಮ ನ್ಯಾಯಾಂಗ—ಆರ್. ಗುರುರಾಜ
೧೧೯ ಸ್ವಾಮಿ ವಿವೇಕಾನಂದ—ಸೋಮನಾಥಾನಂದ
೧೨೦ ಗರ್ಭಿಣಿ ಮತ್ತು ಶಿಶುಸಂರಕ್ಷಣೆ—ಡಾ|| ವಿ. ಎಲ್ ಪಂಡಿತ್
೧೨೧ ಬೆಲೆಗಳ ನಿರ್ಧಾರ ಮತ್ತು ಯೋಜನೆಗಳ ಯಶಸ್ಸು
—ಟಿ. ಬಿ. ಚಂದ್ರಶೇಖರಯ್ಯ
೧೨೨ ಜೀವಸತ್ವಗಳು—ಕೆ. ಎಸ್. ಲಕ್ಷ್ಮಣರಾವ್
೧೨೩ ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ
—ದೇವಂಗಿ ಟಿ. ಚಂದ್ರಶೇಖರ
೧೨೪ ದ್ಯುತಿಸಂಶ್ಲೇಷಣ—ಎಂ. ಆರ್. ರಾಘವೇಂದ್ರರಾವ್
೧೨೫ ಅನುವಂಶೀಯತೆ—ಹಾ. ಬ. ದೇವರಾಜ ಸರ್ಕಾರ್
೧೨೬ ವಿಶ್ವಶಾಂತಿ—ಎಚ್. ಎಲ್. ಮಲ್ಲಯ್ಯ, ಎಂ.ಎ.
೧೨೭ ಭಗವದ್ಗೀತಾ ಸಂದೇಶ—ಸೋಮನಾಥಾನಂದ
೧೨೮ ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೧೨೯ ಕೆಲವು ಸಾಂಕ್ರಾಮಿಕ ರೋಗಗಳು
—ಡಾ|| ಎ. ನಾರಾಯಣಪ್ಪ
೧೩೦ ವಿಶಿಷ್ಟಾದ್ವೈತ ಸಂಗ್ರಹ—ಎಂ. ಬಿ. ಎಸ್. ಐಯ್ಯಂಗಾರ್
೧೩೧ ಮಾನವ ಮತ್ತು ಪ್ರಕೃತಿ—ಟಿ. ಜಿ. ಸಿದ್ಧಪ್ಪಾರಾಧ್ಯ

ಸಾದಾ ಪ್ರತಿ ೨೫ ಪೈಸೆ ; ಉತ್ತಮ ಪ್ರತಿ ೩೭ ಪೈಸೆ.